# ಅರೆಬಾಸೆ ಮುಡ್ಪು

ಅರೆಬಾಸೆ ತಿಂಗ ಪತ್ರಿಕೆ

ಅರೆಬಾಸೆ ಕಲೆ, ಸಾಹಿತ್ಯ, ಸಂಸ್ಕೃತಿಗೊಂದು ಕೈಗನ್ನಡಿ

ಅರೆಬಾಸೆ ಉಳ್ಸಿಕೆ ನಮ್ಮೊಟ್ಟಿಗೆ ಕೈ ಜೋಡ್ಸಿ

ವಾರ್ಷಿಕ ಚಂದಾ ರೂ.300/-

ಹೆಚ್ಚಿನ ಮಾಹಿತಿಗೆ ಸಂಪರ್ಕಿಸಿ 9535615759 / 8971066293













---


ಮುದ್ರಕರು : **ನೇಹಾ ಕ್ರಿಯೇಷನ್ಸ್**, ಬನಶಂಕರಿ 2ನೇ ಹಂತ, ಬೆಂಗಳೂರು-70.

ಕೂಡಕಂಡಿರ ತಮ್ಮಯ್ಯ, 98453 19878, 080-26710552

**ಸಂಪಾದಕೀಯ ಮಂಡಳಿ**
**ಪ್ರಧಾನ ಸಂಪಾದಕ:**
ವಿನೋದ್ ಮೂಡಗದ್ದೆ

**ಸಂಪಾದಕ ಮಂಡಳಿ:**
ಅಮೆಮನೆ ಪಾಲಾಕ್ಷ
ಕೊಂಬಂಡ ಜೀವನ್

## ಸಂಪಾದಕೀಯ

ಮಳೆರಾಯ ಈ ಸಲ ರೈತರ ಮೇಲೆ ಹಂಞ ಕರುಣೆ ತೋರ್ಸಿ ಸರಿ ಹೊತ್ತ್‌ಗೆ ಕಾಲಿಸುಟ್ಟು. ನಾಟಿ ಕೆಲ್ಸಕ್ಕೆ ಜನ ತಮ್ಮನ್ನ ತೊಡಗಿಸಿಕಣ್ತಾ ಒಳೊ. ತೋಟ ಕೆಲ್ಸ ಮೆಲ್ಲಮೆಲ್ಲನೆ ಸುರು ಆಗ್ತಾ ಉಟ್ಟು.

ಹಂಗೂ ಹಿಂಗೂ ಬೇಸಗೆ ರಜೆ ಮುಗ್ದ್ ಮಕ್ಕ ಎಲ್ಲ ತಮ್ಮ ಮನೆ ಸೇರಿ ಆವ್ವು. ಮತ್ತೆ ಇನ್ನೊಂದು ವರ್ಷಕ್ಕೆ ನೋಡ್ವ ಆಸೆ ಕಣ್ಣ್‌ಗಳ್‌ಂದ ತಾತ ಅವ್ವ ಒಳೊ. ಪುಸ್ತಕ ಜೋಡ್ಸುಡು, ಬಟ್ಟೆ ಬರೆ ಮಾಡ್ದರ್ಲಿ ಅಪ್ಪ ಅವ್ವ ಒಳೊ. ಮದ್ವೆ ಮನೆ, ಹಬ್ಬ, ನೆಂಟ್ರ ಮನೆ ತಿರ್‍ಗಿ ಮನ್ಸ್‌ಲಿಲ್ಲದ ಮನ್ಸ್‌ಲಿ ತಮ್ಮ ಮನೆಗಳ್ಗ್‌ಗೆ ಹೊರ್‍ಟ್ವೊಳೊ. ಊರಲಿರವ್ಕೆ ಮಳೆಗಾಲನ ಹೆಂಗು ತಳ್ಳುದುತೇಳ್ದರ ಚಿಂತೆ ಸುರು ಆವ್ವು. ಮಕ್ಕಳ್ಗೆ ಅಳ್‌ಂಬು, ಕಣಿಲೆ ಹುಡ್ಕುದೇ ದೊಡ್ಡ ಸಾಹಸ. ಪರೀಕ್ಷೆಗೆ ಮನಿ ಎದ್ದವೆನೊ ಗೊತ್ಲೆ ಆದ್ರೆ ಅಳ್‌ಂಬು ಹುಡ್ಕಿಕೆ ಮಾತ್ರ ಹೊತ್ತ್‌ಗೆ ಮುಂಚೆ ಎದ್ದ್ ಗದ್ದೆ ಪುಣಿಗೆ ಇಳ್ದ್ ಆಗಿದ್ದದೆ. ಎಷ್ಟೇ ಕಾಸ್ ಕೊಟ್ಟರೂ ಮಳೆಗಾಲದ ಆ ದಿನಗ ಮತ್ತೆ ಸಿಕ್ಕುಲೆ.

ಅರೆಬಾಸೆ ಮುಡ್ಪುನ ಸುಗ್ಗಿ ತಿಂಗಳ ಸಂಚಿಕೆ ಕೆಲವ್ ಕಾರಣಂದ ಹಂಞ ತಡ ಆಗಿ ನಿಮ್ಮನ್ನ ತಲ್ಪಿಯುಟು. ಏನೇ ತಪ್ಪುಗ ಇದ್ದರೂ ನೇರವಾಗಿ ನಾವ್ಗೆ ತಿಳ್ಸಿ, ತಿದ್ದಿಕಂಡ್ ಸರಿಪಡ್ಸಿಕಂಡವೆ.

ಮುಂದಿನ ಸಂಚಿಕೆಲಿ ಇನ್ನಷ್ಟ್ ವಿಷಯಗಳೊಟ್ಟಿಗೆ ಕಾಂಬೊನೊ.. ಅಲ್ಲಿ ಮುಟ್ಟ ನಿಮ್ಮ ಸಹಕಾರ ಹಿಂಗೆ ಇರ್‍ಲಿ.

**–ಇಂತಿ ವಿನೋದ್**

## ಮುಡ್ಪುನ ಒಳ್ಗೆ

# ನಮ್ಮೊಳಗಿನ ಸಾಧಕರ್

**–ಹೊಸೊಳಿಕೆ ಯೋಗೀಶ್**

**<u>ಕರಾಟೆಲಿ ಮಿಂಚುತ್ತಿರುವ ಅಣ್ಣ ತಮ್ಮ ಪ್ರತಿಕ್‌ದೇವ ಮತ್ತು ಪ್ರಣಾಮ್‌ದೇವ</u>**

ಸುಳ್ಯ ತಾಲೂಕುನ ಗುತ್ತಿಗಾರು ಗ್ರಾಮದ ಶಿವರಾಮ ದೇವ ಮತ್ತೆ ಯಶೋಧ ಅವರ ಎರ್ಡ್ ಗಂಡ್ ಮಕ್ಕ ಪ್ರತಿಕ್‌ದೇವ ಮತ್ತೆ ಪ್ರಣಾಮ್ ದೇವ. ಪ್ರತೀಕ್ ಗುತ್ತಿಗಾರ್‌ನ ಬ್ಲೆಸ್ಡ್ ಕುರಿಯಕೋಸ್ ಶಾಲೆಲಿ ಹತ್ತನೇ ತರಗತಿಲಿ ಓದ್ತಾ ಉಟ್ಟು. ಪ್ರಣಾಮ್ ಗುತ್ತಿಗಾರ್‌ನ ಸರಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆಲಿ ಆರನೇ ತರಗತಿಲಿ ಓದ್ತಾ ಉಟ್ಟು. ಈ ಮಕ್ಕ ಕರಾಟೆಲಿ ರಾಷ್ಟ್ರ ಮಟ್ಟಲಿ ಸಾಧನೆ ಮಾಡಿಯೊಳೊ.

ಪ್ರತಿಭೆಗೆ ಯಾವುದೇ ಜಾತಿ, ಬಾಸೆ, ದೇಶ, ತಾಕತ್ತ್ ಅಡ್ಡ ಬಾದುಲೆ. ಆಸಕ್ತಿ, ನಿರಂತರ ಪರಿಶ್ರಮ, ಶ್ರದ್ಧೆ ಮತ್ತೆ ಪ್ರೋತ್ಸಾಹ ಸಿಕ್ಕಿರೆ ಪ್ರತಿಭೆ ಅರಳಿ ಹೂವಾಗಿ ನಾಡಿಗೆ ಪರಿಮಳ ಸೂಸಿದೆ. ಈ ನಿಟ್ಟ್‌ಲಿ ಪ್ರತಿಕ್ ಮತ್ತೆ ಪ್ರಣಾಮ್ ಸಾಧನೆ ಮೆಚ್ಚುವಂತದ್.



ಹಳ್ಳಿ ಪ್ರದೇಶದ ಕೃಷಿ ಕುಟುಂಬಲಿ ಹುಟ್ಟಿದ ಈ ಮಕ್ಕಳ್ಗೆ ಗುರು ಆಗಿ ಸಿಕ್ಕಿದೊವು ಚಂದ್ರಶೇಖರ ಕನಕಮಜಲು. ತಾವು ಬೆಳ್ದ್ ಇಂತಹ ಎಷ್ಟೋ ಮಕ್ಕಳ ಬೆಳ್ಸಿದ ಪುಣ್ಯ ಕೀರ್ತಿ ಇವ್ಕೆ ಸೇರ್ದೆ.

ಕಲ್ಯದರ್ಲ್ಲೂ ಮುಂದೆ ಇರ್‍ವ ಪ್ರತಿಕ್ 2020ರ ಒಲಂಪಿಕ್ ಕರಾಟೆ ಸ್ಪರ್ಧೆಲಿ ಭಾಗವಹಿಸಿ ಪದಕ ಗೆಲ್ಲುವ ಗುರಿ ಇಸಿಕಂಡ್ ಪ್ರಯತ್ನ ಪಟ್ಟದೆ. ನಾಗರಿಕ ಸೇವಾ ಪರೀಕ್ಷೆಗೆ ಈಗಲೇ ತಯಾರು ನಡ್ಸ್‌ತಾ ಇರ್‍ವ ಇಂವ ಮುಂದೆ ಐ.ಎ.ಎಸ್ ಮಾಡಿ ವಾಯು ಸೇನೆಗೆ ಸೇರ್‍ವ ಮನ್ಸ್ ಈ ಹೈದಂದ್.



**<u>ಪ್ರತಿಕ್‌ನ ಸಾಧನೆ ಗುರ್ತ್‌ಗ:</u>**

ಮೂರ್‌ನೇ ಕ್ಲಾಸ್‌ಲಿ ಕರಾಟೆ ಕಲ್ಯಕೆ ಸುರುಮಾಡಿ ಮೂರೇ ವರ್ಷಲಿ ಬ್ಲ್ಯಾಕ್ ಬೆಲ್ಟ್ ಪಡ್‌ಕಂಡ ಇಂವನ ಸಾಧನೆಗೆ ಬೆನ್ನ್ ತಟ್ಟಕು. 2011 ರ್ಲಿ ರಾಷ್ಟ್ರ ಮಟ್ಟದ "ಶಿಟೋರಿಯೋ ಕರಾಟೆ ಫೆಡರೇಶನ್ ಓಪನ್ ಚಾಂಪಿಯನ್ ಶಿಪ್" ಲಿ ಇನಾಮು. 2012 ರ್ಲಿ ರಾಜ್ಯ ಮಟ್ಟದ "ಮೈಸೂರು ದಸರಾ ಕರಾಟೆ ಚಾಂಪಿಯನ್‌ಶಿಪ್" ಲಿ ಸುರೂನ ಇನಾಮು. 2013 ರ್ಲಿ ಜಿಲ್ಲಾ ಮಟ್ಟದ "ಮಾರ್ಷಲ್ ಜಪಾನ್ ಚಾಂಪಿಯನ್ ಶಿಪ್" ಲಿ ಮೂರ್ ವಿಭಾಗಗಳ್ಲಿ ಸುರೂನ ಇನಾಮುನ ಪಡ್ಕಂಡುಟು. 2014 ರ್ಲಿ ಜಿಲ್ಲಾ ಮಟ್ಟದ "ಕಡಿಹಾಯ್ ಮಾರ್ಷಲ್ ಅಕಾಡೆಮಿ ಇಂದರ್ ಡೋಕೋ ಕರಾಟೆ ಟೂರ್ನಮೆಂಟ್"ನ ಬ್ಲಾಕ್ ಬೆಲ್ಟ್‌ನ ಕರಾಟೆ ವಿಭಾಗಲಿ ಪ್ರಥಮ, ಗುಂಪುನ ಕರಾಟೆಲಿ ತೃತೀಯ, ಟೀಮುಕಟಾಲಿ ತೃತೀಯ ಸ್ಥಾನ ಪಡ್ಕಂಡೊಳೊ. 2015 ರ್ಲಿ ರಾಜ್ಯ ಮಟ್ಟದ ಆಲ್ ಕಾಲೇಜು ಕರಾಟೆ ಚಾಂಪಿಯನ್ ಸ್ಪರ್ಧೆಲಿ ಕಟಾ ಕಮಿಟೆಲ್ಲಿ ಸುರುನ ಇನಾಮು. 2016 ರ್ಲಿ ಚೆನ್ನೈಲಿ ನಡ್ದ ಓಪನ್ ಚಾಂಪಿಯನ್‌ಶಿಪ್‌ಲಿ ಪ್ರತಿನಿಧಿಸಿ ಕಟ ವಿಭಾಗಲಿ ಸುರುನ, ಕುಮಿಟೆ ವಿಭಾಗಲಿ ತೃತೀಯ ಸ್ಥಾನ, 2016 ರ್ಲಿ ಚೆನ್ನೈ ಶಾಂತಮ್ ಮೊನೊ ಪೋರ್ಟ್ ಕ್ರೀಡಾಂಗಣ ಮೈಲಾಪುರಲಿ ನಡ್ದ ಏಷಿಯನ್ ಕರಾಟೆ ಸ್ಪರ್ಧೆಲಿ ಭಾರತನ ಪ್ರತಿನಿಧಿಸಿ ಎರ್ಡ್ ಚಿನ್ನದ ಪದ್ದ ಗಟ್ಟಿಗ.

**ಪ್ರಣಾಮ್‌ನ ಸಾಧನೆ ಗುರ್ತ್‌ಗ:**

2014 ರ್ಲಿ ದ.ಕ ಜಿಲ್ಲಾ ಮಟ್ಟದ ಕುಮಿಟೆಲಿ ದ್ವಿತೀಯ ಮತ್ತೆ 2015 ರ ಸ್ಪರ್ಧೆಲಿ ಸುರುನ, 2015 ರ್ಲಿ ಸುಳ್ಯಲಿ ನಡ್ದ ರಾಜ್ಯ ಮಟ್ಟದ ಆಲ್ ಕಾಲೇಜ್ ಕರಾಟೆ ಚಾಂಪಿಯನ್ ಶಿಪ್‌ನ ಕುಮಿಟೆಲಿ ಸುರುನ ಸ್ಥಾನ ಪಡ್ದ್ ಚಿನ್ನದ ಪದಕನ ತಮ್ಮದಾಗಿಸಿಕಂಡೊಳೊ. 2014 ರ ರಾಜ್ಯ ಮಟ್ಟದ ಕರಾಟೆ ಚಾಂಪಿಯನ್ ಶಿಪ್‌ನ ಕಟಾ ವಿಭಾಗಲಿ ಸುರುನ ಸ್ಥಾನ. 2015 ರ್ಲಿ ಪುತ್ತೂರ್‌ಲಿ ನಡ್ದ ಜಿಲ್ಲಾ ಮಟ್ಟದ ಕಡಿಹಾಯ್ ಮರಿಟಲ್ ಅಕಾಡೆಮಿ ಚಾಂಪಿಯನ್ ಶಿಪ್‌ಲಿ ಕುಮಿಟೆಲಿ ಸುರುನ ಸ್ಥಾನ. 2014 ರ ಬುಡೋಕಾನ್ ಇಂಟರ್‌ನ್ಯಾಶನಲ್ 32ನೇ ಅಖಿಲ ಭಾರತ ಬುಡೋಕಾನ್ ಕರಾಟೆ ಪೆಡ ಚಾಂಪಿಯನ್‌ಶಿಪ್. 2014 ಮಂಗಳೂರು ಶ್ರೀನಿವಾಸ ಮಲ್ಯ ಇಂಡೋರ್ ಸ್ಟೇಡಿಯಂಲಿ ನಡ್ದ ರಾಷ್ಟ್ರ ಮಟ್ಟದ ಕರಾಟೆ ಸ್ಪರ್ಧೆಲಿ ಕರ್ನಾಟಕನ ಪ್ರತಿನಿಧಿಸಿದ ಪ್ರತಿಭೆ. 2015 ರ್ಲಿ ಸುಳ್ಯಲಿ ನಡ್ದ ರಾಜ್ಯ ಮಟ್ಟದ ಆಲ್ ಕಾಲೇಜ್ ಕರಾಟೆ ಚಾಂಪಿಯನ್ ಸ್ಪರ್ಧೆಲಿ ಕುಮಿಟೆಲಿ ಎರಡನೆ, ಟೀಮ ಕಟಾಲಿ ಎರಡನೇ, 2015 ರ್ಲಿ ಮೈಸೂರ್ಲಿ ನಡ್ದ ರಾಜ್ಯ ಮಟ್ಟದ ಕರಾಟೆ ಸ್ಪರ್ಧೆಲಿ ಎರಡನೇ, 2016 ಚೆನ್ನೈ ಶಾಂತಮ್ ಮೊನೊ ಪೋರ್ಟ್ ಒಳಾಂಗಣ ಕ್ರೀಡಾಂಗಣದ ಮೈಲಾಪುರಲಿ ನಡ್ದ ಏಷ್ಯನ್ ಕರಾಟೆ ಸ್ಪರ್ಧೆಲಿ ಭಾರತದ ಪ್ರತಿನಿಧಿಯಾಗಿ ಕುಮಿಟೆ ಮತ್ತೆ ಕಟಾ ವಿಭಾಗಲಿ ಚಿನ್ನದ ಪದಕ. 2016 ರ್ಲಿ ಚೆನ್ನೈನ ಚೆ.ಚೆ ಬಾಸ್ಕೆಟ್ ಬಾಲ್ ಇನ್‌ಡೋರ್ ಸ್ಟೇಡಿಯಂಲಿ ನಡ್ದ ನ್ಯಾಶನಲ್ ಕರಾಟೆಲಿ ಕುಮಿಟೆಲಿ ಸುರುನ ಇನಾಮು, ಕಟಾಲಿ ತೃತೀಯ ಇನಾಮುನ ಈ ಪೋರ ಪಡ್ಕಂಡುಟು.



ಅಣ್ಣನ ನೋಡಿ ಆಸಕ್ತಿ ಹುಟ್ಟಿಸಿಕಂಡ ಈ ಹೈದ ಬ್ರೌನ್ ಬೆಲ್ಟ್ ಪಡ್ದುಟು. ನ್ಯಾಯಧೀಶನಾಗಿ ಸಮಾಜ ಸುಧಾರಿಸುವ ಕನಸು ಪ್ರಣಾವ್‌ಗೆ ಹೋದ ಎಲ್ಲಾ ಕಡೆ ಇನಾಮು ಗೆಲ್ಲುವ ಈ ಮಕ್ಕಳ ಸಾಧನೆ ಹಿಂಗೆ ಮುಂದುವರ್ದ್ ಹೆತ್ತವ್ಕೆ, ಊರವ್ಕೆ ಕೀರ್ತಿ ತರ್‌ಲಿ ತಾ ಪತ್ರಿಕೆ ಹಾರೈಸಿದೆ.

---

## ಹಾಸ್ಯ

ಮಂಞ: ಅಪ್ಪ ನನ್ನ ಪ್ರಶ್ನೆಗೆ ಉತ್ತರ ಹೇಳ್

ಅಪ್ಪ: ಎಂತದ್.. ನಿನ್ನ ತಲೆ ಹರಟೆ ಪ್ರಶ್ನೆ?

ಮಂಞ: ಗಾಂಧಿ ತಾತನ ಹೆಸ್ರೆಂತ?

ಅಪ್ಪ: ಮೋಹನದಾಸ ಕರಮಚಂದ ಗಾಂಧಿ ತ,, ಅಷ್ಟು ಗೊತ್ತಿಲೆನ?

ಮಂಞ: ಅಯ್ಯೋ! ಅದಲ್ಲಪ್ಪ

ಅಪ್ಪ: ಅದೇ ರಾ...

ಮಂಞ: ಅಯ್ಯೋ ನಾನ್ ಕೇಳ್ದ್ ಗಾಂಧಿನ ತಾತನ ಹೆಸ್‌ರ್

ಅಪ್ಪ: ಡಾಟ್ ಅತ್ತ ಪಾಪ್ರು.

**–ಉಳುವಾರನ ರೋಶನ್ ವಸಂತ್**

ಅವ್ವ: ಏ ಹೈದ ಟಿ.ವಿಲಿ, ಪೇಪರ್‌ಲಿ ಏನ್ ನ್ಯೂಸ್.. ಬಾರ್ ಗ ಹೈವೆಂದ 500 ಮೀಟರ್ ದೂರ ಇರಕು ಗಡ.

ಹೈದ: ಹೌದು ಅವ್ವ ಬಾಳ ಕಷ್ಟ ಅವ್ವ

ಅವ್ವ: ಇನ್ನು ಮುಂದೆ ಕಷ್ಟ ಅಲ ರ?

ಹೈದ: ಕುಡಿಯಕು ತ ಯೋಚನೆ ಆದ್ರೆ ದೂರದ ಗೋವಕ್ಕೆ ಹೋಗಿ ಕುಡ್ದ್ ಬಂದವೆ ಇನ್ನ್ 500 ಮೀಟರ್ ಯಾವ ಲೆಕ್ಕ ಅವ್ವ?

**–ಮೇರ್ಕಜೆ ಲೋಹಿತ್ ಸೋಮಯ್ಯ**

# ಓ ಹೋಯ್ ಬಾವಾ ಹೆಂಗೊಳರಿ

–ಕೊಕ್ಕಲೇ ಮಾಲಿನಿ ಮುತ್ತಪ್ಪ

ಬೂರ‍್ಗನಳ್ಳಿಲಿ ಒಬ್ಬ ಊರ್ ಗೌಡ ಇತ್ತ್. ಇಂವ ವ್ಯಾಪಾರದ ದಲ್ಲಾಳಿ ಕೆಲ್ಸ ಮಾಡ್ತಿತ್ತ್. ಬಾಯಿಂದ ಬರ‍್ವ ಮಾತೆಲ್ಲ ಇನ್ನೊಬ್ಬರ‍್ನ ಬಲೆಗೆ ಬೀಳ್ಸಿಕಣ್ವ ಮಾತಾಗಿತ್ತ್. ತಲೆ ತುಂಬ ಸುಳ್ಳು. ಇಂವನ ಮಾತ್‌ಗೆ ಮರಳಾಗದವೇ ಇತ್ಲೆ. ಈ ಮಂಸ ಊರ‍್ಲಿ ದೊಡ್ಡ ಹೆಸ್ರ್‌ವಾಸಿಯಾಗಿತ್ತ್. ಯಾವುದೇ ಬೆಳ್ದ ಬೆಳೆನಾಗ್ಲಿ, ಸಾಂಕಿದ ದನ–ಕರ್, ಕೋಳಿ–ಆಡ್‌ಗಳಾಗಲೀ, ಗೂಡೆ–ಹೈದಗಳ ಸಂಬಂಧ ಸರಿ ಮಾಡಿ ಮದ್ವೆ ಮಾಡ್ಸುದಾಗಲಿ, ಇಂವನ ಮದ್ಯಸ್ಥಿಕೆ ಇಲ್ಲದೆ ಯಾವ್‌ದೇ ಕೆಲ್ಸ ಮುಂದುವರಿತಿತ್ಲೆ.

ಗೌಡನ ಗೊತ್ತಿದ್ದವು, ಗೊತ್ತಿಲ್ಲದವು ಇಂವನ ಮಾತಾಡ್ಸಿ ತಿಂಡಿ ಕಾಫಿ ಕೊಡ್ಸುತ್ತಿದ್ದೋ.

ಊರ‍್ಲಿ ಬೆಳೆಗ ಫಸಲ್‌ಗ ಬರ‍್ವ ಹೊತ್ತ್‌ಲಿ ಕೃಷಿಕರ ಮನೆಗಳ್ಲಿ ಕಾಣ್ಸಿಕಂಡಿತ್ತ್. ಕಮ್ಮಿ ಕ್ರಯಲಿ ತಕಂಡ್ ಜಾಸ್ತಿ ಕ್ರಯಕ್ಕೆ ಮಾರಿ ಒಳ್ಳೆ ಕಾಸ್ ಮಾಡ್ತಿತ್. ಯಾರಾದ್ರ್ ಮದ್ವೆ ಆಕುತಾದ್ರೆ ಇಂವನ ಹಕ್ಕಲೆ ಬಂದ್ ಸಂಬಂಧ ಗಟ್ಟಿ ಮಾಡ್ಕಂತ್ತಿದ್ದೊ. ಹೈದ–ಗೂಡೆಗಳ ಜೋಡಿನ ಸರಿ ಮಾಡಿಕೊಡ್ತಿತ್.

ದನ–ಕರ‍್ಗಳ ಜಾತ್ರೆಗೆ ಯಾವ ಊರ‍್ಲಿ ನಡ್ದದೆ ತ ಒಂದ್ ವಾರಕ್ಕೆ ಮುಂದೆನೆ ಇಂವಂಗೆ ಗೊತ್ತಾಗ್ತಿತ್. ಇಂವ ಎಲ್ಲರ‍್ನೂ ಮಾತ್‌ಂದನೇ ಮರ‍್ಳ್ ಮಾಡ್ತಿತ್. ಹೊತ್ತ್‌ಗೆ ಸರಿಯಾಗಿ ಸುಳ್ಳು ಹೇಳ್ತಿತ್. ವಯಸ್ಸಾದ ಗೋವುನ ವಯಸ್ಸಾತ್ಲೆ ತ, ವಯಸ್ಸಾಗದೇ ಇರ‍್ವ ಗೋವುನ ವಯಸ್ಸಾಗುಟ್ಟು ತ ಹೇಳಿ ಜನರ‍್ನ ನಂಬಿಸಿ ವ್ಯಾಪಾರ ಕುದ್ರುಸುತ್ತಿತ್..

ಇಂವನ ಮಾತ್ಗೆ ಮರ‍್ಳಾಗಿ ಜನಗ ಮೋಸಹೋಗ್ತಿದ್ದೋ.. ಕೆಲ್ಸಕೆ ಬಾರದ ಕತ್ತೆನ ದೇವ್ರುಂತ ಮನ್ಸಲಿನೇ ಗ್ಯಾನ ಮಾಡಿ ಹತ್ತಾರ್ ಆಸೆಗಳ್ನ ಇಟ್ಟ್ ತಕಂಡೋದರೆ, ಇಂವನ ಮೇಲೆ ಸಿಟ್ಟಿದ್ದ ರೈತರ ಕತ್ತೆ ಎಷ್ಟೇ ಒಳ್ಳೆ ಕ್ರಯ ಕೊಡುವಂಗೆ ಇದ್ದರೂ, ಯಾರು ಸ ಕತ್ತೆನ ತಕಣಿಕೆ ಹತ್ರನೇ ಬರ‍್ತಿತ್ಲೆ.

ನಾ ಮಾಡ್ವ ಕೆಲ್ಸ ಪೊರ‍್ಲುನ ಕೆಲ್ಸ ಅಲ್ಲ ತ ಗೌಡಂಗೆ ಗೊತ್ತಿತ್. ಏನ್ ಮಾಡ್ದು ತಲೆ ಮಾರ್‌ಂದ ಬಂದ ಕೆಲ್ಸ ಇದಾಗಿತ್. ಹೆಣ್ಣ್ ಮಕ್ಕಳ್ನ ಸಾಂಕಿಕಣಿಕಾಗಿ ಹೊಟ್ಟೆ ತುಂಬ್ಸಿ ಕಣಿಕಾಗಿ ಸುಳ್ಳು ಹೇಳಿ ಸಂಪಾದನೆ ಮಾಡ್ತಿತ್.

ಪೊನ್ನಿ ತಿಂಗಳ್ಲಿ ಒಂದ್ ದಿನ ಹಂಗೇ ಕಾಫಿ ಕುಡ್ಕಂಡ್ ಕೈಯಾಲೆಲಿ ಕುದ್ರಿಕನ ಒಂದ್ ಕಣ್ಣ್ ದೃಷ್ಟಿ ಬೆದ್ರ್ ಹಾಕಿದ ಮುಳಿಮಾಡ್ ಮೇಲೆ, ಇನ್ನೊಂದ್ ದೃಷ್ಟಿ ಮಣ್ಣ್ ಗೋಡೆ ಮೇಲೆ ಬಿತ್ತ್.

ಎಲಿಗ ಅತ್ತಂದ ಇತ್ತ, ಇತ್ತಂದ ಅತ್ತ ಓಡ್ತಾ ಇದ್ದದ್ ಕಂಡತ್, ಗೋಡೆ ಬಿದ್ದೋಕೆ ಆಗುಟು, ಬೆದ್ರ್ ಹಾಕಿದ ಮುಳಿಮಾಡ್ ಗೆದ್ದ್ಲು ಹಿಡ್ದ್ ಆಗನೋ, ಈಗನೋ ತಲೆಮೇಲೆ ಬಿದ್ದೋಕೆ ಆಗುಟು.

ಮನಸ್ಥಿತಿ ನೋಡಿ, ನಾ ಎಷ್ಟೇ ಸುಳ್ಳು ಹೇಳಿ, ಕಾಸ್ ಮಾಡ್ರು ಕೈಲಿ ಕಾಸ್ ಉಳಿತಿಲ್ಲೆ ತಾ ಬೇಜಾರ್‌ಲಿ ಕುದ್ದಿತ್ ಗೌಡ. ಈ ಹೊತ್ತಿಗೆ ಸರಿಯಾಗಿ...

"ಓ ಹೋಯ್ ಬಾವಾ ಹೆಂಗೊಳರಿ" ದೊಡ್ಡ ದನಿಲಿ ಕರ‍್ಕಂಡ್ ಒಬ್ಬ ದೂರದ ನೆಂಟ ಮನೆ ಹಕ್ಕಲೆ ಬಾತ್. ಇಂವನ ನೋಡಿ ಅವಂಗೆ ಬಾಳ ಕುಸಿ ಆತ್.

"ನಾ ಸೌಖ್ಯಲಿ ಒಳೆ, ನೀವೆಂಗೊಳರಿ" ತ ಗೌಡ ಕೇಳ್ತ್. ನಾ ತುಂಬ ಬೊಚ್ಚಿ ಹೋಗೊಳೆತ ಬಂದ ನೆಂಟ ಹೇಳ್ದ್. ಏನಾತ್ ನೀವ್ಗೆತ ಗೌಡ ಕೇಳ್ದ್.

ಮನೆಗೆ ಬಂದ ನೆಂಟನ ಹೆಸ್ರ್ ರಾಮಣ್ಣ. ನೋಡಿಕೆ ಗಡ್ಡ ಮೀಸೆ ಬುಟ್ಟು ಪೊರ‍್ಲುಲಿ ಉಟ್ಟು. ವಯಸ್ಸ್ ಸುಮಾರ್ 60–65 ಆಗಿರ‍್ದು.

ಇಲ್ಲಿಂದ ಒಂದು ಫರ್ಲಾಂಗ್ ಹೋದರೆ ಸಿಕ್ಕುದೆ ಬಾಳೆ ತೋಟ. ತೋಟದ ಒಳಗೆ ಹೋದರೆ ನಾಲ್ಕೈದ್ ಮನೆ ಉಟ್ಟು. ಕೆಂಪು ಪಯಿಂಟ್ ಹಾಕಿದ ಮನೆ ನಮ್ಮನೆ. ಅಂತ ಹೇಳಿ ಗೊತ್ತು ಮಾಡಿಕಂತ್.

ನಂಗೊಂದು ಹಸು ಬೇಕಿತ್ತ್ ಬಾವ. ಹಂಞ ಸಹಾಯ ಮಾಡಿತ ಕೇಳಿಕಂಡ್ತ್. ರಾಮಣ್ಣನ ನೋಡ್ರೆ ತುಂಬಾ ಬಡತನಲಿ ಇರ‍್ವಂಗೆ ಉಟ್ಟು. ಇಂವಂಗೆ ಪೊರ‍್ಲುನ ಹಸ್ನ ಕೊಡ್ಸಿಯಾರ್ ನಾ ಮಾಡ್ದ ಪಾಪನ ತೀರ‍್ಸಿಕಣಿಕೆ ಒಳ್ಳೆ ಸಮಯತೇಳಿ ಮನ್ಸಲಿನೇ ಗೌಡಂಗೆ ಸಮಾಧಾನ ಆತ್.

ಮನೆಗೆ ಬಂದ ರಾಮಣ್ಣಂಗೆ ಕುಡಿಯಕೆ ಕಾಫಿ ಕೊಟ್ಟ್ ಮಾತಾಡಿಕೆ ಇಬ್ಬರು ಸುರು ಮಾಡ್ದೊ. "ನೀವು ಎಲ್ಲಿಯಾರ್ ಹಸುನ ನೋಡಿಯೊಳರಿಯ ತ ಗೌಡ ಕೇಳ್ತ್. ನೋಡಿಯೊಳೆ ಬಾವ ನೀವ್ಗಳ ಅಡಿಕೆ ತೋಟ ಹಕ್ಕಲೆ ಸೋಮಪ್ಪನವ್ರ ಮನೆ ಅಂವನಲ್ಲಿ ಕೊಡ್ವ ಹಸು ಉಟ್ಟು, ನೋಡಿಯೊಳೆ, ನೀವೇ ನಿತ್ತ್ ವ್ಯಾಪಾರ ಕುದ್ರುಸೊಕು ತ ರಾಮಣ್ಣ ಹೇಳ್ದ್.

ಸೋಮಪ್ಪನ ಹೆಸ್ರ್‌ನ ಕೇಳ್ತಿದ್ದಂಗೆ ಅಂವನ ಮನೆ ಸ್ಥಿತಿ ನೆನ್ಸಿಕಂಡ್ ಸೋಮಪ್ಪನ ಕುಟುಂಬದವು ಇಂವನ ಕಣ್ಮುಂದೆ ಕಾಣ್ಸಿದಂಗೆಯಾಗಿ ಗೌಡನ ಮುಖ "ಸುಟ್ಟ ಬಾಳೆಕಾಯಿ" ಹಂಗೆ ಆತ್.

ಅಂವನ ಮನೆಲಿ ಸಣ್ಣ ಮಕ್ಕಗ, ಅಂವಂಗೂ ದಮ್ಮು ಕಾಯಿಲೆಗ, ಹೆಣ್ಣ್‌ಗೂ ಹಂಞ ಹುಷಾರಿಲ್ಲೆ. ಹೊಟ್ಟೆಗೆ ಗಂಜಿನು ಎತ್ತುದುಲೆ. ಸೋಮಪ್ಪ ಖರ್ಚಿಗೆ ದುಡ್ಡಿಗಾಗಿ ಹಸುನ ಮಾರಿಕೆ ತೀರ್ಮಾನ ಮಾಡಿತ್. ಯಾರಿಗಾರ್ ನನ್ನ ಹಸುನ ಮಾರ್ಸಿ ಕೊಡಿ ತಾ ಹೇಳಿತ್ತ್.

ಮಕ್ಕಳಿಗೆ ಒಂದ್ ಹೊತ್‌ನ ಗಂಜಿಗೂ ನನ್ನ ಹತ್ರ ಗತಿ ಇಲ್ಲೆ ಲೋನ್‌ಲಿ ಹಸುನ ತಕಂಡೆ, ಲೋನ್‌ನು ಮುಕ್ತ್‌ಲೆ. ನೋಡಿ ಬೇಕರೆ.. ಸುಳ್ಳುಮನಿ ನಾ ಹೇಳಿಕಿಲೆ. ಕಿವಿಲಿ ಕೊಂಡೆಬೇರೆ ಕುತ್ತಿಯೊಳೊ, ಕಿವಿ ಹರದೋಕೆ ಆವ್ಟು. ಹಸುನ ಮಾರ್ದ ದುಡ್ಡುಂದ ಲೋನ್ ಕಟ್ಟಿ ಒಂದ್ ಹೊತ್ತಾರ್ ನೆಮ್ಮದಿಂದ ಗಂಜಿ ತಿನ್ನಕ್, ನೀವ್ ಬೇಕಾರೆ ನಿಮ್ಮ ಕಮಿಷನ್ ತಕಣಿ ತ ಸೋಮಪ್ಪ ಹೇಳ್ದ್ ನೆನ್ಪುಗೆ ಬಾತ್ ಗೌಡಂಗೆ.

ಕಷ್ಟ ಇದ್ದದ್ ನಿಜ! ಸೋಮಪ್ಪಂಗೆ, ಅಲ್ಲದೇ ಹಸುನ ಒಳ್ಳೆ ಕ್ರಯಕ್ಕೆ ಮಾರ್ಲೊಕು. ಇಂವನ ಹಸು ಸೌಖ್ಯಂದ ಇತ್ಲೆ. ಒಂದೆರಡ್ ಸಲ ಅಲ್ಲ ಆರ್ ಸಲ ಕರ್‌ಹಾಕಿಕೆ ಗರ್ಭದರ್ಸಿತ್. ಆದ್ರೆ ಕರ್‌ಹಾಕಿಕೆ ಆಗದೇ ಹೊಟ್ಟೆಲಿನೇ ಸತ್ತೇಹೋಗಿತ್ತ್. ಅಂದರೂ ಬದ್ಕಿದ್ ಮನೆದೇವ್ರ ಸತ್ಯಲಿ. ಇನ್ನೊಂದ್ ಸಲ ಗರ್ಭದರ್ಸಿರೆ ಜೀವಕೆ ಹಾನಿ ಉಟ್ಟುತೇಳಿ ಪಶು ಡಾಕ್ಟರ್ ಹೇಳಿದ್ದೊ.

ಈ ಹಸುನ ರಾಮಣ್ಣಂಗೆ ಮಾರ್ಸಿ ಕೊಡುದಾದರೂ ಹೆಂಗೆತೇಳ್ವ ಯೋಚನೆಲಿ ಗೌಡ ಮುಳ್ಗಿ ಹೋಗಿತ್ತ್.

ಅವನನೇ ದೃಷ್ಟಿ ಇಟ್ಟ್ ನೋಡ್ತಿದ್ದ ರಾಮಣ್ಣ "ಯಾಕೆ ಬಾವ ಗ್ಯಾನ ಮಾಡ್ತಾ ಒಳ್ರಿ?" ಹಸುಗೆ ಏನಾರ್ ಕಾಯಿಲೆ ಮನಿ ಉಟ್ಟ? ಇದ್ದರೆ ಮೊದ್ಲೇ ಹೇಳಿಬುಡಿ. ನಾ ಹಸುನ ತಕಂಬೊದು ನನ್ನ ಪಿಳ್ಳೆಗಾಗಿ. ಒಂದ್ ವರ್ಷಮನಿಯಾತ್ ಆಸ್ಪತ್ರೆಲಿದ್ದ್. ಅಂವ ಬೊಳ್ಪುಗೆನೆ ಮನೆಗೆ ಬಂದುಟು. ಡಾಕ್ಟರ್ ಹೇಳಿಯೊಳೊ ದಿನಾ ಹಾಲ್ ಕುಡಿಯಕೆ. ಅಲ್ಲದೆ ಹಸುನ ಕ್ರಯಕೆ ತಕಂಡ್ರೆ ಖರ್ಚಿಗೆ ಕಾಸ್ ಆದೆ. ಕುಡಿಯಕೆ ಹಾಲ್ ಆದೆ ತ ನಂಬಿಕಂಡ್ ನೀವ್ಗಳಲ್ಲಿಗೆ ಬಂದೊಳೆ ಬಾವ ತ ರಾಮಣ್ಣ ಹೇಳ್ದ್.

ನಲ್ವತ್ ವರ್ಷದ ದಲ್ಲಾಳಿ ಕೆಲ್ಸಲಿ ಗೌಡಂಗೆ ಇಂತಹ ಪರಿಸ್ಥಿತಿ ಎಂದೂ ಆತ್ಲೆ. ಮಕ್ಕಳಿಗೆ ಒಂದ್ ಹೊತ್ತ್‌ನ ಗಂಜಿಗಾಗಿ ಹಸುನ ಮಾರಿಕೆ ಹೊರ್ಟ ಸೋಮಪ್ಪ, ಮತ್ತೆ ಸೌಖ್ಯ ಇಲ್ಲದ ಪಿಳ್ಳೆನ ಆರೋಗ್ಯಕ್ಕಾಗಿ ನನ್ನನೇ ನಂಬಿ ಬಂದ ಈ ರಾಮಣ್ಣ. ಇವಿಬ್ಬರ್ಲಿ ಯಾರ ಪರ ಮಾತಾಡಿ, ಸುಳ್ಳು ಹೇಳಿ ನಾ ವ್ಯಾಪಾರ ಕುದ್ರುಸಲಿ ತ ಯಕ್ಷ ಪ್ರಶ್ನೆಯಾಗಿ ಅಂವನಲ್ಲಿ ಉಳ್ತ್. ಯಾರ ಪರ ಮಾತಾಡಿರೂ ಪಾಪನ ಕಳ್ಕಂಬದರ ಬದ್ಲ್ ಇನ್ನೊಬ್ಬಂಗೆ ಅನ್ಯಾಯ ಮಾಡ್ದೆತೇಳ್ವ ಇನ್ನಷ್ಟ್ ಪಾಪ ನನ್ನನ ಸುತ್ತಿಕಂಬದು ತ ಗೌಡಂಗೆ ಅನ್ಸಿತ್.

ಬಾವ, ನಾವ್ ಸೋಮಪ್ಪನ ಮನೆಗೆ ಪೋಯನಾ? ತ ರಾಮಣ್ಣ ಕೇಳ್ನಾಕನ, ಗೌಡನ ಬಾಯಿಂದ ಅಂವಂಗೆ ಗೊತ್ತಿಲ್ಲದಂಗೆ ಇನ್ನೊಂದ್ ಸುಳ್ಳು ಹೊರಗೆ ಬಾತ್.

ನಾ ದಲ್ಲಾಳಿಯಲ್ಲ... ನಾ ಒಬ್ಬ ಮರ್ಯಾದಸ್ಥ ಮಂಸ,, ನಂಗೆ ಕೆಟ್ಟೆಸ್ರ್ ತರ್ಬೇಡಿಯಾ! ನೀವ್‌ಗೆ ಯಾರ್ ಹೇಳ್ದೊ. ಅವರ ಹಕ್ಕಲೆ ಹೋಗಿ.. ನೀವ್‌ಗೆ ಬೇಕಾದಂಗೆ ಮಾಡಿ. ನನ್ನ ತಲೆಕೆಡ್ಸ್‌ಬೇಡಿ ತ ಗೌಡ ಬಾಯಿಗೆ ಬಂದ ಹಂಗೆ ಮಾತಾಡ್ತ್.

ರಾಮಣ್ಣ, ಹೋದ ದಾರಿಗೆ ಸುಂಕ ಇಲ್ಲೆ ತೇಳಿ, ಮೆಲ್ಲೆ ಎದ್ದ್ ಹೊರ್ಗೆ ಹೋತ್.

ಗೌಡಂಗೆ ಇಷ್ಟೊತ್ತ್ ನಡ್ದದ್ ಕನ್ಸ್‌ತೇಲಿ ಮತ್ತೆ ಬೆದ್ರ್‌ಹಾಕಿದ ಮುಳಿಮಾಡ್ ಗೆದ್ದ್‌ಲ್ ಹಿಡ್ದ ಆಗನೊ, ಈಗನೋ ಬಿದ್ದೋಗುವ ಸಮೆ ಉಟ್ಟುತೇಳಿ ಚಿಂತೆಲಿ ಕುದ್ದತ್.

# ಬೆಂಗ್ಳೂರೆಂಬ 'ಮಿಣ್ಬುಳಿ'

–ಡಾ. ಪುನೀತ್ ರಾಘವೇಂದ್ರ ಕುಂಟುಕಾಡು

“ಅಣ್ಣೂ.. ಗಂಟೆ ಏಳಾತ್.. ಎದ್ರ್.. ಕಾಲೇಜ್‌ಗೆ ಹೊತ್ತಾದೆ.. ಕುಂಞ ಮಾವನ ದೊಡ್ಡ ಮಂಜ ಕುಟ್ಟನ ನೋಡು.. ಇಂಜಿನಿಯರಿಂಗ್ ಮುಗ್ಸಿ ಬೆಂಗ್ಳೂರ್ಲಿ ಒಳದ್ ಗೊತ್ತ್ಲೆನಾ ನಿಂಗೆ? ತಿಂಗಳಿಗೆ ಲಕ್ಷ ಲಕ್ಷ ದುಡ್ದದೆ.. ನೀನೂ ಹಂಗೆ ಆದು ಬೇಡನಾ?” ಬೊಡ್ರೊಟ್ಟಿ ಹೊಯ್ತಾ ಬೇಬಿಯಕ್ಕ ಮಂಜನ ಮೇಲೆ ಪರ್ಂಚಿಕೆ ಸುರು ಮಾಡ್ದೊ. ಅಮ್ಮನ ಮಾತ್ ಕೇಳ್ದ ಅಣ್ಣು 'ನಾನೂ ಒಂದಿನ ಹಂಗೇ ಆವೇಂತಾ' ಗೊಣ್ಗ್ಯಂಡ್ ಹಲ್ಲುಜ್ಜಿಕೆ ನೀರಡಿಗೆ ಓಡ್ತ್. ನಮ್ಮ ಕೆ.ವಿ.ಜಿ ಗೌಡ್ರ ಒಂದ್ ಇಂಜಿನಿಯರಿಂಗ್ ಕಾಲೇಜ್ ಕಟ್ಟ್‌ಸಿದರ್ಂದ ಇಂದ್ ನಮ್ಮ ಸುಳ್ಯದ ಮೂಲೆ ಮೂಲೆನ ಹೈದ/ಗೂಡೆಗ ಬಿ.ಇ ಮಾಡ್ತೊಳೊ. ಇಲ್ಲರೆ ಡಿಗ್ರಿನೋ ಬೇರೇನೋ ಮಾಡಿ ಕೆಲ್ಸ ಹುಡ್ಕ್ಯಂಡ್ ಹೊರ್ಡಕಗಿತ್ತೇನೋ!! ಹಂಗೇ ನಮ್ಮ ಅಣ್ಣುನೂ.. ಬಿ.ಇ ಕಲಿತಾ ಲಾಷ್ಟ್ ಸೆಮ್ ಲಿ ಪ್ರಾಜೆಕ್ಟ್ ವರ್ಕ್ ಮಾಡಿಕೆ ಬೆಂಗ್ಳೂರ್ಗೆ ಬಂದ್ ಎತ್ತಿದ ಹೈದನ ಖುಷಿಗೆ ಲೆಕ್ಕನೇ ಇಲ್ಲೆ. ಸುಳ್ಯಲಿ ಇಂಜಿನಿಯರಿಂಗ್ ಕಾಲೇಜೇ ಎತ್ತರದ ಕಟ್ಟಡ ನೋಡಿದ್ದ ಅವಂಗೆ ಬೆಂಗ್ಳೂರ್ಲಿ ಬಿಲ್ಡಿಂಗ್‌ಗಳ ನೋಡಿ ಒಮ್ಮೆ ತಲೆ ತಿರ್ಗಿರೆ, ಕೆ.ಎಫ್.ಸಿ ಚಿಕನ್, ಮೆಕ್‌ಡಿ ಬರ್ಗರ್ ನಾಲಿಗೆಗೆ ಹೊಸ ರುಚಿನೇ ತೋರ್ಸಿತ್. ಅಲ್ಲಿ ಎಂ.ಜಿ.ರೋಡ್ / ಬ್ರಿಗೇಡ್ ರೋಡ್‌ಲಿ ತೊಳ್ದ ಮೊಟ್ಟೆನಾಂಗಿರುವ ಗೂಡೆಗಳ ನೋಡಿ 'ನಾ ಜಾಬ್ ಮಾಡ್ರೆ ಬೆಂಗ್ಳೂರ್ಲೇ' ಹೇಳಿಕಂಡ್ ಊರ್ ಕಡೆ ಹೊರ್ಟತ್ ನಮ್ಮ ಹೈದ!!!

ಇಂಜಿನಿಯರಿಂಗ್ ಮುಗ್ದಾಂಗೆ ಒಳ್ಳೆ ಕಂಪೆನಿಲಿ ಕೆಲ್ಸನೂ ಸಿಕ್ಕಿತ್ ನಮ್ಮ ಅಣ್ಣು ಹೈದಂಗೆ. ಬೇಬಿಯಕ್ಕಂಗಂತೂ ಖುಷಿಲಿ ಕಾಲ್ ನೆಲಲೇ ನಿಲ್ತ್ತಿಲ್ಲೆ. ಎಲ್ಲವ್ಕೂ ಫೋನ್ ಮಾಡಿ ಒಂದ್ ರೌಂಡ್ ಹೇಳಿನೂ ಆತ್ 'ನಮ್ಮ ಅಣ್ಣು ಬೆಂಗ್ಳೂರ್ಗೆ ಹೊರ್ಟುತೂಂತ!!' ಸಿಟಿಗೆ ಬಂದ ಅಣ್ಣು ನಾಕ್ ಹೈದಂಗಳೊಟ್ಟಿಗೆ ಸೇರಿ ಒಂದ್ ರೂಮ್‌ನೂ ಮಾಡ್ತ್.. ಊಟ ತಿಂಡಿ ಹೋಟ್ಲ್/ಇಲ್ಲರೆ ಕಂಪೆನಿ ಫುಡ್ ಕೋರ್ಟ್!! ಬೊಳ್ಪಿಗೆ ಬರ್ಗರ್, ಮಧ್ಯಾಹ್ನ ಪಾಸ್ತಾ, ಕತ್ತಲೆಗೆ 'ಅಂಬೂರ್ ಧಮ್ ಬಿರಿಯಾನಿ'!! ವೀಕೆಂಡ್ ಪಾರ್ಟಿ ಮತ್ತೆ ಸುತ್ತಿಕೆ ಮಂತ್ರಿ ಮಾಲ್/ ಸೆಂಟ್ರಲ್ ಮಾಲ್!! ಕಲರ್ ಕಲರ್ ಪಬ್‌ಗಳ ಮುಂದೆ ಊರ್ಲಿ ಆತಿದ್ದ “ಹೊನಲು ಬೆಳಕಿನ ಕಬ್ಬಡ್ಡಿ” ಯಾವ ಲೆಕ್ಕ. ಇದ್ ಸ್ವರ್ಗ!! ನಂಗೆ ಜಾಬ್ ಸಿಕ್ಕಿಕೆ ಪುಣ್ಯ ಮಾಡಿರೊಕೂಂತ ನೆನ್ಸಿಕಂಬತಿದ್ದ ಅಣ್ಣುಗೆ ಊರ್‌ನ ನೆನ್ಪೇ ಇಲ್ಲೆ!!

ಬೆಂಗ್ಳೂರ್‌ಗೆ ಬಂದ್ ತಿಂಗ ಮೂರ್ ಕಳ್ದಾಂಗೆ ಈ ಮಾಯಾನಗರಿನ ನಿಜ ಅನುಭವ ಆಕೆ ಸುರಾತ್ ನೋಡಿ. ಸಂಬಳ ಎಷ್ಟೇ ಬಂದರೂ ತಿಂಗಳ ಆಕಿರಿಗೆ ಕೈಲಿ ಒಳಿದು ಕೆಲವೇ ಸಾವಿರ (ಅದೂ ಗ್ಯಾರಂಟಿ ಇಲ್ಲೆ). ಕೇವಲ ನಾವು ಉಸ್ಯಾಡುವ ಗಾಳಿ ಮಾತ್ರ ಫ್ರೀ.. ಆದರೆ ಅದೂ ಹೊಗೆ, ಧೂಳು ತುಂಬಿ ಹಿಂಬತಾಕನ ಮೂಂಕುಲಿ ಕಪ್ಪು ಕಪ್ಪು ಹೊಡಿ! ಮನೆಲಿ ಕೋಳಿ ಗೈಪು ಮಾಡ್ತಾಕನ ಮಂಜಂಗೇಂತ ಕರಿಯಡ/ಪಟ್ಟಕಾಯಿ ತೆಗ್ದಸ್ತಿದ್ದೊ ಅಮ್ಮ, ಇಲ್ಲಿ ಉಂಡರೂ ಉಣದಿದ್ದರೂ ಕೇಳಂವ ಇಲ್ಲೆ. ರೂಮ್ ಮೇಟ್ ಬಾದೇ 12 ಘಂಟೆ ಮೇಲೆ!! ಎಲ್ಲಿ ಹೋದರೂ ಬೆಂಳ್ತಕ್ಕಿನೇ ಹೊರ್ತು ಕೊಸ್ಲಕ್ಕಿ ಅನ್ನ, ಕುಡು ಪೊಜ್ಜಿ/ ಒಣ್ಗಿಲ್ ಮೀನ್‌ನ ಪೊರ್ಮುಳನೇ ಇಲ್ಲೆ!! ಒಮ್ಮೆ ಊರ್ಗೆ ಹೋಗಿ ಬಾಕೆ ಆಗುವ ಖರ್ಚ್ ಊರುಲಿ ಕಾಲೇಜ್‌ಗೆ ಹೋಕಾಕನ ಇಡೀ ತಿಂಗಳಿಗೇ ಸಾಕಾತಿತ್ತ್. ಫೋನ್ಲಿ ಹಳೆ ದೋಸ್ತಿಗಳೊಟ್ಟಿಗೆ ಮಾತಾಡಿ ಮಾತಾಡಿ ಫೋನ್ ಬಿಸಿ ಆತಷ್ಟೇ ಹೊರ್ತ್ ಮನ್ಸ್ ತಂಪಾತ್ಲೆ (ಕಾರಣ ಎಲ್ಲರ ಕತೆನೂ ಅದೇ!) ಎಲ್ಲಿಯಾರ್ ಹೊರಗೆ ಹೋಗಿ ಬರನಾಂತ ರೂಮ್ ಮೇಟ್ ನೊಟ್ಟಿಗೆ ಕೇಳ್ರೆ “ಟ್ರಾಫಿಕ್ ಲೇ ಅರ್ಧಇನ ಕಳೇದು ಬೇಡ” ತಾ ಉತ್ತರ. ಮನೆಲಿರ್ಕಾಕನ ಶಾಲೆಮಾವನ ಮನೆ, ಬಂಗಾರ್ಕೊಡಿ ದೊಡ್ಡತ್ತೆ ಮನೆ, ಊರು ಬೈಲ್ ಉಗ್ಗಪ್ಪನ ಮನೆ ಎಲ್ಲಾ ಸುತ್ತಿಕಂಡ್ ಬಾಕೆ ಆತಿತ್ತ್. ಇಲ್ಲಿ? ಊರ್‌ಗೆ ಬಂದಿರ್ಕಾಕನ 'ಬೆಂಗ್ಳೂರ್ಗೆ ಬಾಕನ ಮನೆಗೆ ಬಂದೇ ಬರೊಕು' ಹೇಳ್ದವೆಲ್ಲಾ ಫೋನ್ ಮಾಡ್ರೆ 'ನಾವು ಈವಾರ ಇಲ್ಲೆಯಾ.. ಒಂದ್ ಫಂಕ್ಷನ್ಗೆ ಹೋಕುಟ್ಟು' ತಾ ಹೇಳ್ತೊಳೊ. ಈ ಬೆಂಗ್ಳೂರೇ ಹೀಂಗೆ... “ಮಿಣ್ಬುಳಿ”ನಾಂಗೆ.. ನೋಡಿಕೆ ಭಾರೀ ಲಾಯಿಕ್.. ಮಿಣ್ಬುಳಿ ಅಮಾಸೆ ಕತ್ತಲೆಲಿ ಮಿಣ್ಕಿ ಚೂರ್ ಬೆಳ್ಕ್ ತೋರ್ಸಿದೇ ಬುಟ್ಟ್ ಚಂದ್ರನಾಂಗೆ ಪೂರ್ತಿ ಬೆಳ್ಕಲ್ಲ!! ಹಂಗೇ ಬೆಂಗ್ಳೂರ್. ಉಂಬಕೆ ಗಂಜಿ ಕೊಟ್ಟ್, ಬೊದ್ಕಿಕೆ ದಾರಿ ತೋರ್ಸಿದೇ ಹೊರ್ತ್ “ಕೊಡ್ದು ಬೊದ್ಕಲ್ಲ”!! ಆದರೂ ಊರ್‌ಲಿ ಬಿ.ಇ ಮುಗ್ಸಿ ಬೆಂಗ್ಳೂರ್ಲಿ ಇನ್ನೂ ಕೆಲ್ಸಕ್ಕೆ ಪರ್ದಾಡಿಕಂಡ್ ಇರವ್ಕಿಂತ ನನ್ನ ಕಥೆ ಎಷ್ಟೋ ಮೇಲ್. 'ಕುರ್ಡ್‌ಗಿಂತ ಕೋಸ್ ಮೇಲೂಂತ' ನೆನ್ಸಿಕಂಡ್, ಮಾರ್ನೆ ದಿನದ ಕೆಲ್ಸಕ್ಕೆ ಹೊರ್ಡುವ ಚಿಂತೆಲೇ ಮಲ್ಗಿಕೆ ಹೊರ್ಟತ್ ಅಣ್ಣು!!

# ಚೇರಂಗಾಲಲಿ ಗ್ರಾಮಲಿ ಅದ್ದೂರಿಯಾಗಿ ನಡ್ದ 10ನೇ ವರ್ಷದ ತವರೂರ ಕೂಟ ಜಂಭರ

ಭಾಗಮಂಡಲ ಹತ್ರ ಇರ್ವ ಚೇರಂಗಾಲ ಗ್ರಾಮಲಿ ಏಪ್ರಿಲ್ 28, 29 ಹಂಗೆ 30 ಕ್ಕೆ 10ನೇ ವರ್ಷದ ತವರೂರ ಕೂಟ ಜಂಬರ ಭಾರಿ ಲಯ್ಕಲಿ ನಡ್ತ್. ಮೊಟ್ಟನ ಸಿ. ರವಿಕುಮಾರ್ ಅವರ ಅಧ್ಯಕ್ಷತೆಲಿ ಹಂಗೆನೆ ಮೊಟ್ಟನ ಡಾಲು ಮತ್ತೆ ಟ್ರಸ್ಟಿ ಮತ್ತಾರಿ ಎಂ.ರಾಜ ಅವರ ಮುಂದಾಳತ್ವಲಿ ಚೇರಂಗಾಲ ಗ್ರಾಮಸ್ಥರ ಕೂಡುಕೂಟುಲಿ ಈ ಜಂಬರ ನಡ್ತ್. 28 ರಂದ್ ಭಾಗಮಂಡಲ, ಚೆಟ್ಟಿಮಾನಿ ಮತ್ತೆ ಅಯ್ಯಂಗೇರಿ ಪಂಚಾಯ್ತಿ ವ್ಯಾಪ್ತಿಲಿ ಬರ್ವ ಗ್ರಾಮಗಳ ನಡುವೆ ಕ್ರಿಕೆಟ್ ಪಂದ್ಯಾಟಗ ನಡ್ತ್. 29 ರಂದ್ ಇದೇ ಸುರುನ ಸಲ ಕೊಡಗುಲಿ ಸ್ಥಾಪನೆ ಆದ ಸೈನಿಕ ಪುತ್ಥಳಿ ಹಂಗೆ ರಾಷ್ಟ್ರ ಲಾಂಛನದ ಅನಾವರಣ ಏರ್ ಮಾರ್ಷಲ್ ಕೆ.ಸಿ. ಕಾರ್ಯಪ್ಪ ಮತ್ತೆ ಲೆಫ್ಟಿನೆಂಟ್ ಜೆನರಲ್ ಕದಂಬಿ ಅವರ್‌ಂದ ನೆರವೇರ್ತ್. ಇಲ್ಲಿಗೆ ಮೊಟ್ಟನ ರವಿಕುಮಾರ್ ಅವರ ಬಹುದೊಡ್ಡ ಕನ್ಸ್ ನನ್ಸಾತ್ ಹಂಗೆನೆ ಮುಂದೆ ಚೇರಂಗಾಲದ ತರಳಬಾಣೆ ಒಂದು ಪ್ರೇಕ್ಷಣೀಯ ಸ್ಥಳ ಆಗುವಲ್ಲಿ ಯಾವುದೇ ಅನುಮಾನ ಇಲ್ಲೆ.



ಜಂಬರದ ಮುಖ್ಯ ನೆಂಟ್ರಾಗಿ ಕೆ.ಕೆ ಸ್ವಾಮಿ, ಕುಡಕಂಡಿ ಕಾವೇರಮ್ಮ ಸೋಮಣ್ಣ, ತೆಕ್ಕಡೆ ಶೋಭ ಮೋಹನ್, ಏರ್ ಮಾರ್ಷಲ್ ಕೆ.ಸಿ ಕಾರ್ಯಪ್ಪ, ಲೆಫ್ಟಿನೆಂಟ್ ಜೆನರಲ್ ಕದಂಬಿ, ರಮೇಶ್ ಗೋಪಾಲ್ ಹಾಜರಿದ್ದೊ. ತಾರೀಖ್ 30 ರಂದ್ ಆಟೋಟ ಸ್ಪರ್ದೆ ಹಂಗೆ ಕ್ರಿಕೆಟ್ ಆಟದ ಅಂತಿಮ ಹಣಾಹಣಿ ನಡ್ತ್. 5000 ಮೀ. ಓಟಲಿ ಕೋಡಿ ಜಿತು ಮೊದಲ ಇನಾಮು ಪಡ್ಕಂಡ್ರೆ ದೇಶಕೋಡಿ ದೀಪಕ್‌ನವು 2ನೇ ಹಂಗೆ 3ನೇ ಇನಾಮ್‌ನ ಕುಟ್ಟನ ಉದಯ್ ಪಡ್ಕಂಡೊಳೊ. ಹಂಗೆನೆ ಕ್ರಿಕೆಟ್ ಪಂದ್ಯಾಟಲಿ ಪದಕಲ್ಲು ತಂಡ ವಿಜಯಿ ಆದರೆ ಪದ್ಯಾನಿ ಫ್ರೆಂಡ್ಸ್ ಎಮ್ಮೆಮಾಡು ಪಡ್ಕಂಡೊ. ಆಕಿರಿಲಿ ಸಮಾರೋಪ ಜಂಬರಲಿ ಚೇರಂಗಾಲ ಗ್ರಾಮಲಿ ಕ್ರೀಡೆ ಹಂಗೆ ಶೈಕ್ಷಣಿಕ ಕ್ಷೇತ್ರಲಿ ಸಾಧನೆ ಮಾಡ್ದವ್ಕೆ ಸನ್ಮಾನ ಕಾರ್ಯಕ್ರಮ ಹಮ್ಮಿಕಂಡಿದ್ದೊ. ಕ್ರೀಡೆ ಕ್ಷೇತ್ರಲಿ ಕೋಡಿ ಜಿತು ಹಂಗೆನೆ ಹೊಸೂರು ಸುಮಿತ್ರ ಇವ್ಕೆ ಸನ್ಮಾನ ಮಾಡಲಾತ್ ಹಂಗೆನೆ ಶೈಕ್ಷಣಿಕ ಕ್ಷೇತ್ರಲಿ ಕುದಿನೆಕೋಡಿ ಗಾನವಿ ಮತ್ತೆ ಮೊಟ್ಟನ ಶಿಲ್ಪ ಇವ್ಕೆ ಸನ್ಮಾನ ಮಾಡಲಾತ್. ಹಂಗೆನೆ ಚೇರಂಗಾಲ ಗ್ರಾಮಲಿ ಇನ್ನಷ್ಟ್ ಪ್ರತಿಭೆಗ ಮುಂದೆ ಸಾಧನೆ ಮಾಡೊಕು ತಾ ಅತಿಥಿಗ ಹಾರೈಸಿದೊ.



ಸುದ್ದಿ: ಕೋಡಿ ನೀತು ಶಂಭು

## ರಾಷ್ಟ್ರ ರಾಜಧಾನಿಲಿ ಅರೆಭಾಷೆ ಸಂಭ್ರಮ

ರಾಜಧಾನಿ ದೆಹಲಿಯ ಕರ್ನಾಟಕ ಸಂಘಲಿ ಏಪ್ರಿಲ್ 23 ರಂದ್ ಕೊಡವ–ಅರೆಭಾಷೆ ಸಂಭ್ರಮ ಜಂಬರ ನಡ್ತ್. ಭಾಗಮಂಡಲದ ಅಭಿನಯ ಕಲಾಮಿಲನ ಚಾರಿಟೇಬಲ್ ಟ್ರಸ್ಟ್‌ನ ಕಲಾವಿದರ್ ಕೊಡಗು ಹಂಗೆ ದಕ್ಷಿಣ ಕನ್ನಡದ ಗೌಡರ ಸಂಸ್ಕೃತಿನ ಬಿಂಬಿಸುವ ಕಲಾ ಪ್ರದರ್ಶನ ಎಲ್ಲರ ಮೆಚ್ಚುಗೆಗೆ ಪಾತ್ರ ಆತ್. ಇದರ್‍ಲಿ ಕೊಡಗ್‌ನ ಹುತ್ತರಿ, ಹರಿಸೇವೆ, ಕೈಲ್‌ಮೂರ್ತ, ನಾಟಿ ಸಂಭ್ರಮ, ಭತ್ತ ನೆಡ್ದು, ಸೋಬಾನೆ ಹಿಂಗೆ ಬೇರೆ ಬೇರೆ ರೂಪಕಗ ಮತ್ತೆ ದಕ್ಷಿಣ ಕನ್ನಡ ಜಿಲ್ಲೆನ ಬಲೀಂದ್ರ ಪೂಜೆ, ಕಂಗೀಲು ಕುಣ್ತ, ಆಟಿ ಕಳಂಜ ಮುಂತಾದ ಕಲಾ ಕ್ರದರ್ಶನಗ ವೀಕ್ಷಕರ ಮನ ಗೆದ್ದತ್.'

ಕಡೆಗೆ ಕುಶಾಲನಗರದ ಆಟಿಟ್ಯೂಡ್ ತಂಡಂದ ಮನಮೋಹಕ ನೃತ್ಯಗ ಮೂಡಿ ಬಾತ್. ಸ್ಥಳೀಯ ಕಲಾವಿದರ್‌ಂದ ಗಾಯನ ಕಾರ್ಯಕ್ರಮಗ ನಡ್ತ್. ಇದಕ್ಕೂ ಸುರುಗೆ ನಡ್ದ ಉದ್ಘಾಟನಾ ಜಂಬರಲಿ ಸಂಘದ ಅಧ್ಯಕ್ಷ ವಸಂತ ಶೆಟ್ಟಿ ಬೆಳ್ಳಾರೆ ಅಧ್ಯಕ್ಷತೆ ವಹಿಸಿ ಮಾತಾಡ್ದೊ. ಕೊಡಗು ಪ್ರತ್ಯೇಕತೆಯ ಕೂಗುಗ ನಿಲ್ಲಕುತ ಆದ್ರೆ ಕೊಡಗಿನ ಬೇಡಿಕೆಗಳಿಗೆ ಸರ್ಕಾರ ಸ್ಪಂದಿಸಕು. ಕೊಡಗಿಗೆ ವಿಶೇಷ ಪ್ರಾತಿನಿಧ್ಯ ಕೊಡಕು ತಾ ಹೇಳ್ದೊ.

## ಮಾಯಿ ತಿಂಗಳ್ಲಿ ಹತ್ತು ಕುಟುಂಬ ಹದಿನೆಂಟು ಗೋತ್ರದ ದೈವಾಧೀನರಾದವರ ವಿವರ

| ಹೆಸ್ರ್ | ವಯಸ್ | ತೀರ್ದ ತಾರೀಖ್ |
|---|---|---|
| ಚೆರಿಯಮನೆ ಧನಂಜಯ | 43 | 17–3–2017 |
| ಚೆರಿಯಮನೆ ಲಕ್ಷಮ್ಮ | 98 | 20–3–2017 |
| ಕುದುಪಜೆ ಬೋಪಯ್ಯ | 65 | 24–3–2017 |
| ಕರ್ಣಯ್ಯನ ಕೆಂಚಪ್ಪ | 74 | 26–4–2017 |
| ಸಣ್ಣಮನೆ ಕುಶಾಲಪ್ಪ | 70 | 27–4–2017 |
| ತೊತ್ತಿಯನ ರುಕ್ಮಿಣಿ | 53 | 28–4–2017 |
| ಪಾಂಡನ ಸೋಮಣ್ಣ | 63 | 5–5–2017 |
| ತೆಕ್ಕಡೆ ಚಂದ್ರಮ್ಮ | 88 | 8–5–2017 |
| ಕಟ್ಟೆಮನೆ ಸುಂದ್ರಮ್ಮ | 79 | 4–5–2017 |
| ಕೊಟೇರಮನೆ ಗಣಪತಿ | 98 | 9–5–2017 |
| ಮೊಟ್ಟೇರ ಕೆಂಚಮ್ಮ | 85 | 10–5–2017 |
| ಕಲ್ಲುಮುಟ್ಲು ಭಾಗೀರತಿ | 75 | 10–5–2017 |
| ಪೊನ್ನಚನ ರಾಧ | 69 | 11–5–2017 |
| ಚೆರಿಯಮನೆ ಪೊನ್ನಮ್ಮ | 83 | 14–5–2017 |
| ಪಡ್ನೊಳನ ತಮ್ಮಯ್ಯ | 83 | 16–5–2017 |
| ಚಂಗಪ್ಪಬಿಟ್ಟಿರ ಪದ್ಮಾವತಿ | 74 | 17–5–2017 |
| ಪಾಣತ್ತಲೆ ಪೊನ್ನವ್ವ | 82 | 17–5–2017 |

*ನಾವ್ಗೆ ಸಿಕ್ಕ ಮಾಹಿತಿ ಪ್ರಕಾರ ಇಲ್ಲಿ ಪ್ರಕಟಿಸಿಯೊಳೊ. ಇನ್ನ್ ಮುಂದೆ ಯಾವುದಾದರ್ ಮಾಹಿತಿಗ ಇದ್ದರೆ ನಮ್ಮೊಂದಿಗೆ ಹಂಚಿಕಣಿ.

## ಇಂದ್‌ನ ಮೊದ್ವೆ

ಮನವಿ

ಏನ್ ಗೌಜಿ ಏನ್ ಗಮ್ಮತ್ತ್
ಅಕ್ಕಂಗೆ ಒಂದು ಸಂಬಂಧ ಕೂಡಿ ಬಾತ್
ಮಾತ್ ಕತೆಗ ನಡ್ತ್
ಮೊದ್ವೆ ದಿನ ನಿಗದಿ ಆತ್

ನೆಂಪುಟ್ಟು ನಂಗೆ ಇನ್ನ್ ಆ ದಿನ
ದೊಡ್ಡಕ್ಕನ ಮೊದ್ವೆನ ದಿನ
ಕತ್ತಲೆಗೆ ಎಲ್ಲವೂ ಕೂಡಿ ಚಪ್ಪರ ಹಾಕಿ
ಬೊಳ್ಪು ಮುಟ್ಟ ಹೊಗೆಲಿ ಕುದ್ದ್ ತರಕಾರಿ ಕೊಯ್ದದ್

ಊರ ಜನ ಸೇರಿ ಅವರ್ದೇ ಮನೆ ಮೊದ್ವೆ
ತೇಳಂಗೆ ಕೈ ಜೋಡ್ಸಿದೋ
ಹಂದಿ ಹೊಡ್ದ್ ಮಾಸ ಮಾಡಿ ಎಲ್ಲಾ
ಕಾರ್ಯಲೂ ಮುಂದಿದ್ದೋ

ಇಂದ್ಯಾಕೋ ಹೊತ್ತು ಮುಳ್ಗಿರೂ
ಜನರ ಪತ್ತೆ ಇಲ್ಲೆ
ಓಡಾಟದ ತಲೆ ಬಿಸಿ ಇಲ್ಲೆ
ಎಲ್ಲದಕ್ಕೂ ನಿಘಂಟು ಮಾಡಿಸೊಳೋ

ಮಕ್ಕಳಿಗೆಲ್ಲ ಶಾಲೆ ಗಡ
ಆಫೀಸಿಗೆ ರಜೆ ಇಲ್ಲೆ ಗಡ
ಯು.ಎಸ್ ಯು.ಎನ್ ಸಮಯ ಗಡ
ಹಗಲ್‌ಲಿ ರಾತ್ರ ಗಡ ರಾತ್ರಿ ಪಾಳಿ ಗಡ

ವಯಸ್ಸಾದ ಅಪ್ಪ ಅವ್ವ
ನಿಲ್ಲಕೆ ಕುದ್ರಿಕೆ ಬೊತ್ತದ ತಾತ ಅವ್ವ
ಮಾತ್ ಕತೆ ಇಲ್ಲದ ಅಣ್ಣ ತಮ್ಮ
ಮುಖ ಮುಖ ನೋಡದ ನೆರೆಕರೆವು

ಬಾಳಿ ಬೊದ್ಕುವ ಯುವ ದಂಪತಿಗಳ
ಸಡಗರಲಿ ಸ್ಮಶಾನ ಮೌನ

ಜಂಬರ ಎಲ್ಲ ಸಮಾಜಲಿ
ಕೆಮಿ ನಿಮಿರಿಸಿರೂ ಸೋಬಾನೆ ಹಾಡ್‌ಗ
ಕೇಳದತ್
ಕುಣುಕುಣು ಸದ್ದ್ ಮೊಬೈಲ್‌ದೇ ಆತ್

ಸುರು ಆದ ಜಂಬರ ಒಮ್ಮೆ ತೀರ್‍ರೆ
ಸಾಕ್ ತಾ ಆತ್
ಬಂದ ನೆಂಟ್ರ್‌ಗ ಮಾತೇ ಆಡದೆ
ಮನೆಗಳ ಸೇರಿ ಆತ್

ನೀರ್ ಮೊದ್ವೆಗೆ ಗೂಡೆ ಬಿಂದಿಗೆ
ಹೊತ್ತ್ ನಿಂತರೂ
ಕಾಂಬಲೆ ಯಾರೊಬ್ಬರೂ ನೆಂಟ್ರ
ಗೂಡು ಸೇರೋ ತವಕಲಿ ಒಳೊ ಎಲ್ಲರ್

ಮತ್ತದೇ ಗಾಢ ಮೌನ ಮದ್ವೆ ಮನೆಲಿ

---

## ಸೊಕ್ಕು

–ಮುಕ್ಕಾಟಿ ರೇಖ

ಆಚೆ ಮನೆ ಚಾಮವ್ವ
ಕೊಕ್ಕೆ ತಕಂಡ್ ಕೊಯ್ಯಕ್ಕೋತ್
ಕುಜ್ಜೆ ಕಾಯಿ
ಅದ್ ಆಯ ತಪ್ಪಿ
ತಲೆಮೇಲೆ ಬೀತ್
ಚಾಮವ್ವ ಬಡ್ಕಣಿಕೆ ಸುರು ಮಾಡ್ತ್ ಬಾಯಿ
ಮಂಞ ಬಂದ್ ಏಳ್ಸಿ
ನಿಂಗೆ ಬಾರಿ ಸೊಕ್ಕು
ಹೇಳ್ತ್ ನೀನ್ ಇಲ್ಲೆ ಸಾಯಿ

## ಹೊಸ ರುಚಿ–ಮಾಯ್ಕಣ್ಣ್‌ನ ದೋಸೆ

**ಕೊಕ್ಕಲೇ ರುಕ್ಮಿಣಿ ಮುತ್ತಪ್ಪ**

**ಬೇಕಾದ ಸಾಮಾಗ್ರಿಗ** :–ಬೆಳ್ತಿಗೆ ಅಕ್ಕಿ– 2 ಕಪ್; ಸಿಹಿ ಮಾಯ್ಕಣ್ಣ್–4; ಹೆರ್ದ ತೆಂಗಿನಕಾಯಿ–1/2ಕಪ್; ಬೆಲ್ಲದ ಹುಡಿ–1/2ಕಪ್; ಎಣ್ಣೆ–2 ಟೀ. ಚಮಚ; ರುಚಿಗೆ ಉಪ್ಪು

**ಮಾಡ್ವ ಕ್ರಮ**:– ಬೆಳ್ತಿಗೆ ಅಕ್ಕಿನ ತೊಳ್‌ದ್ 1–2 ಗಂಟೆ ನೀರ್‌ಲಿ ನೆನ್ಸಿಟ್ಟ್‌ಕಣಕು. ಮಾವಿನ ಹಣ್ಣ್‌ನ ತೊಳ್ದ್, ಹೆರ್ದ ತೆಂಗಿನಕಾಯಿ, ಬೆಲ್ಲದ ಹುಡಿ, ಉಪ್ಪು ಸೇರ್ಸಿ ನುಣ್ಣಂಗೆ ರುಬ್ಬಿಕಣಕು. ದೋಸೆ ಹಿಟ್ಟ್‌ನ ಹದಕ್ಕೆ ಮಾಡಿಕಣಕು. ಕಾದ ಕಾವಲಿಗೆ ಎಣ್ಣೆ ಹಾಕಿ ದೋಸೆ ಹಿಟ್ಟ್‌ನ ತೆಳ್ಳಗೆ ಹರಡೊಕು. ಹಿಟ್ಟ್‌ನ 2 ಬದಿನು ಕೆಂಪಾಗಿ ಕಾಯಿಸೊಕು. ಈಗ ಮಾವಿನ ಹಣ್ಣ್‌ನ ದೋಸೆ ರೆಡಿ.

# ಹಳಬರ ಜೋಳಿಗೆ

## ಜಯಮ್ಮ ಚೆಟ್ಟಿಮಾಡ ಅವರ ಹಳಬರ ಜೋಳಿಗೆ ಸಂಚಿಕೆಂದ ಆರ್ಸಿದ ಕಥಾ ಮಾಲಿಕೆ–3

## ಬೊಂಡ ಪುರಾಣ

### ಕತೆ ಕೊಟ್ಟವು: ಎನ್.ಎಸ್ ದೇವಿಪಪ್ರಸಾದ್

ಇದೆಂತ ಬೊಂಡ ಪುರಾಣ? ಬೊಂಡ ತೇಳ್ರೆ ದಕ್ಷಿಣ ಕನ್ನಡ ಜಿಲ್ಲೆಯವ್ಕೆ ಬುಟ್ಟರೆ ಹೊರಗಿನವ್ಕೆ ಅಷ್ಟ್ ಗೊತ್ತಾಕಿಲೆ. ಬೇರೆ ಊರ್ನವ್ ಈ ಶಬ್ದ ಕೇಳಿ "ಬೊಂಡವೋ.. ಬೋಂಡಾವೋ" ತ ಮುಸಿ ಮುಸಿ ನಗಾಡ್ದೂ ಉಟ್ಟು. ನಮ್ಮೂರ ಕಲ್ಪವೃಕ್ಷಗಳ್ಲಿ ಅಮೃತೋಪಮ ನೀರ್‌ಂದ ತುಂಬಿದ ಎಳೆ ತೆಂಗಿನ ಕಾಯಿನೇ 'ಬೊಂಡ' ಕನ್ನಡಲಿ ಇದ್ಕೆ ಎಳನೀರು, ಸೀಯಾಳ ತ ಹೇಸ್ರ್‌ಗ ಸ ಉಟ್ಟು. ಹಂಗಿದ್ದರೂ ನಾನ್ ನನ್ನ ಬರಹಲಿ ಬೊಂಡ ತೇಳೋ ಪದನೇ ಬಳ್ಸಿಕಣೆ.

ಬೊಂಡಕೆ ಸಂಬಂಧಿಸಿದಂಗೆ ನನ್ನ ಬಾಲ್ಯದ ಒಂದು ನೆನ್ಪು! ಹಿರಿಯವು ಒಬ್ಬರ್ ನನ್ನನ್ನ ಅವರ ಮುಂದೆ ನಿಲ್ಲಿಸಿಕಂಡ್ ನನ್ನ ತಲೆನ ಎರಡ್ ಕೈಗಳ್‌ಂದ ಹಿಡ್ಕಂಡ್ (ತೆಂಗಿನಕಾಯಿ ಆಡ್ಸುವಂಗೆ) ಮೆಲ್ಲನೆ ಅಲ್ಲಾಡಿಸ್ತಾ, ಬಾಯಿಲಿ ನೀರ್ ಅಲ್ಲಾಡ್ಕನ ಆಗುವಂಗೆ ಸದ್ದ್‌ನಂಗೆ ಲೊಚಲೊಚನೆ ಸದ್ದ್ ಮಾಡಿ "ನಿನ್ನ ತಲೆ ಒಳಗೆ ತುಂಬ ನೀರು ಉಟ್ಟುಯಾ" ತ ಹೇಳ್ತಾ ತಮಾಸೆಲಿ ಇದ್ದೊ. ನೀರು ಅಲ್ಲಾಡ್ಕನ ಆಗುವ ಸದ್ದ್‌ನ ಹೆಂಗೆ ಮಾಡ್ದು ತಾ ಅವು ನಂಗೆ ಕಲ್ಸಿ ಕೊಟ್ಟ ಮೇಲೆ ನಾನ್ ಸ ನನ್ನಕ್ಕಿಂತ ಚಿಕ್ಕ ಮಕ್ಕಳ ತಲೆ ಆಡ್ಸಿ "ನಿನ್ನ ತಲೆ ಒಳಗೆ ತುಂಬಾ ನೀರು ಉಟ್ಟು" ತಾ ಹೇಳ್ತಾ ಇದ್ದೆ. ಚಿಕ್ಕ ಮಕ್ಕಳ್ಗೆ ಕುಸಿಯಾಗಿ ಇನ್ನೂ ಮಾಡ್ ತ ತಮ್ಮ ತಲೆನ ಒಡ್ಡುತ್ತಿದ್ದೊ. (ಬಾಯಿ ಬುಟ್ಟು ಕೆಳ ತುಟಿನ ಹಲ್ಲುಗಳ ಮೇಲ್ಭಾಗಕ್ಕೆ ಬಾಗಿಸಿ ನಾಲಿಗೆನ ತಾಂಕಿಸಿಕಂಡ್ ಹಿಂದೆ ಮುಂದೆ ಮಾಡ್ರೆ ಆ ಸದ್ದ್ ಬಂದದೆ)

ಆ ಕಾಲಲಿ ಬೊಂಡನ ತೆಂಗಿನಕಾಯಿ ಸುಲಿದಂಗೆ ಸುಲ್ದ್ ನುಣ್ಣಂಗೆ ಕೆತ್ತ್‌ತಾ ಇದ್ದೊ. ಈ ವಿಚಾರ ಇಪ್ಪತ್ತೈದು ವರ್ಷಕ್ಕಿಂತ ಕಡಿಮೆ ವಯಸ್ಸಿನವ್ಕೆ ಗೊತ್ತಿರ್ದು ಕಮ್ಮಿ. ತೆಂಗಿನ ಮರ ಹತ್ತಿ ಬೊಂಡ ಕೆಳಗೆ ಇಳ್ಸುದಕ್ಕಿಂತ ಹೆಚ್ಚ್ ಹೊತ್ತು ಅದನ್ನ ಕೆತ್ತಿಕೆ ಬೇಕಿತ್ತ್. ಆದರೂ ಕೂಡ ಹಿಂದಿನ ಕಾಲದ ಜನ ಈ ಪ್ರದೇಶಲಿ ಈಗಿನಂಗೆ ಸಿಪ್ಪೆ ಮುತ್ತನೆ ಬೊಂಡ ಕುಡಿಯತಿತ್ಲೆ. ಇಲ್ಲರೆ ಈಗಿನಂಗೆ ಬೊಂಡ ಕೆತ್ತಿ ಕೊಡವು ಇತ್ಲೆ. ಹಿಂಗಾಗಿ ಐದು ಹತ್ತು ಬೊಂಡ ಸುಲ್ದ್ ತಯಾರ್ ಮಾಡಿಕೆ ಕಡಿಮೆ ಹೇಳ್ರೂ ಒಂದು ಘಂಟೆನೇ ಬೇಕಿತ್ತ್. ಎಳೆಬೊಂಡಕ್ಕಿಂತ ಆಗ ಬಣ್ಣಂಗಾಯಿ ಹೆಚ್ಚ್ ಜನಪ್ರಿಯ ಆಗಿತ್ತ್. ತೆಳುಬಾವೆ ಬಂದ ಬೊಂಡಗಳ್ನ "ಬರೀ ಕರ್ಕ್, ನೀರ್ ಬರೇ ಚಪ್ಪಾಟೆ ಚಾರ್" ತ ಹೀನೈಸುತ್ತಾ ಇದ್ದೊ. ಈ ಬಣ್ಣಂಗಾಯಿನ ಕುಡ್ದ ಮೇಲೆ ಇಬ್ಭಾಗ ಮಾಡ್ತಾ ಇದ್ದೊ. ಅರ್ಧಭಾಗ(ಗಡಿ) ಒಳಗೆ ಕತ್ತಿಯ ಕೊಡಿಂದ ಗೀರು ಹಾಕಿ ನಾಲ್ಕ್ ಭಾಗ ಮಾಡ್ತಾ ಇದ್ದೊ. ಅದಾದಮೇಲೆ ಕತ್ತಿಯ ಕೊಡಿಂದ ಕುತ್ತಿ ಚಿಪ್ಪಿಂದ ನಾಲ್ಕ್ ತ್ರಿಕೋನಾಕಾರದ ಹೋಳುಗಳ್ನ ಬೇರೆ ಮಾಡ್ತಾ ಇದ್ದೊ. ಈ ಕೆಲ್ಸಕ್ಕೂ ಸಾಕಷ್ಟ್ ಹೊತ್ತ್ ತಗಲ್ತ್ ಇತ್ತ್. ಎಷ್ಟೇ ಸೂಕ್ಷ್ಮವಾಗಿ ಬುಡ್ಸಿರೂ ಚಿಪ್ಪಿಯ ಅಂಶ ಈ ಹೋಳುಗಳ್ಲಿ ಸೇರಿಕಣ್ದೆ ಇರ್ತಾ ಇತ್ಲೆ. ಕೆಲವ್ ಅವಸರದ ಜನರ ಕೈಗೆ ಸಿಕ್ಕಿರೆ, ಹೋಳಿನ ಹಿಂಬದಿ ಎಲ್ಲಾ ಕಂದ್ ಬಣ್ಣವಾಗಿ ತಿನ್ನುವಾಗ ರುಚಿ ಕೆಡ್ತಾ ಇತ್ತ್. ಹಿಂದಿನ ಆ ವಿಧಾನಲೇ ಇಲ್ಲಿ ಬೊಂಡ ಕುಡ್ಯದು ಮುಂದುವರ್ದಿದ್ದರೆ ಬೊಂಡಕ್ಕೆ ಹತ್ತು ರುಪಾಯಿ ಆಗಿದ್ದರೆ ಕೆತ್ತುವ ಸರ್ವಿಸ್ ಚಾರ್ಜು ಹತ್ತು ರುಪಾಯಿ ಸೇರಿ ಇಪ್ಪತ್ತು ರುಪಾಯಿ ಆಗ್ತಾ ಇತ್ತ್.

ಈಗಲೂ ನಮ್ಮ ಕಡೆ ಮನೆಗೆ ಬಂದವ್ಕೆ ಕುಡಿಯಕೆ ಬೊಂಡ ಕೊಟ್ಟರೆ ಅದ್ ಮರ್ಯಾದೆ. ಅವ್ಕೆ ತೋರಿಸುವ ಗೌರವ ಸಂಕೇತ. ಅತಿಥಿ ಅಭ್ಯಾಗತರಿಗೆ ಕೊಡಿಕೆ ಇರ್ಲಿ ತ ನೇ ಮನೆಯ ಎದುರಿಗೆ ಹೆಚ್ಚ್ ಕೊಡಿಗೆ ಬೆಳೆಯದ, ನೋಡಿಕೆ ಲಾಯ್ಕ ಕಾಣುವ ಚೆಂದೆಂಗು (ಗೆಂದ) ಮರಗಳ್ನ ನೆಟ್ಟ್ ಬೆಳ್ಸಾ ಇದ್ದೊ.

ಹಳೆಯ ಸಂಪ್ರದಾಯದವು ಹತ್ತಿರ ಸಂಬಂಧಿಕರ ಬೊಜ್ಜಕ್ಕೆ ಎರಡ್ ಬೊಂಡಗಳ್ನ ಒಗ್ಗಿ ಹಾಕಿ ತಕಂಡ್ ಹೋಗ್ತಾ ಇದ್ದೊ. ಅಂತಹ ಬೊಂಡಗಳ ತೊಟ್ಟುಗಳ್ನ ಹಂಗೆನೇ ಬುಟ್ಟು ಸಿಪ್ಪೆ ಸುಲ್ದ್ ನುಣ್ಣಂಗೆ ಮಾಡ್ದರ್ಲಿ ಒಂದು ರೀತಿನ ಕಲಾತ್ಮಕತೆ ಇದ್ದದೆ. ಈ ತೊಟ್ಟುಗಳ ಕೆಳಭಾಗಕ್ಕೆ ಹುರಿ ಹಗ್ಗನ ಜೋಡ್ಸಿ ಎರಡು ಬೊಂಡಗಳ ಮಧ್ಯೆ ಹಿಡ್ಕಣಿಕೆ ಅನುಕೂಲ ಆಗುವಂಗೆ ಹೆಣೆಯುತ್ತಾ ಇದ್ದೊ. ಈ ರೀತಿ ಬಾಳ ಸುಂದರವಾಗಿ ಹೆಣ್ದ್ ತಂದ ಜೋಡಿ ಬೊಂಡ ನೋಡ್ದ ನೆನ್ಪ್ ಈಗಲೂ ನನ್ನಲ್ಲಿ ಉಟ್ಟು.

ಬೆಂಗಳೂರು ಕಡೆ ಪ್ರಯಾಣ ಮಾಡ್ಕನ ದಾರಿ ಕರೆಲಿ ಬೊಂಡದ ಗುಡ್ಡೆ ಹಾಕಂಡ್ ಮಾರಿಕೆ ನಿಂತಿದ್ದವೆ. ಅಲ್ಲಿ ಕಾರ್ ನಿಲ್ಲಿಸಿದಂಗೆ ಚಕ–ಚಕ ತ ಐದ್ ನಿಮ್ಸಲಿ ಕಾರೊಳಗೆ ಇದ್ದವ್ಕೆಲ್ಲ ಬೊಂಡ ಕೆತ್ತಿಕೊಟ್ಟವೆ. (ಈ ಕೆಲ್ಸಲಿ ಹೆಣ್ಣ್ ಮಕ್ಕ ಸ ಏನ್ ಕಮ್ಮಿ

ಇಲ್ಲೆ) ಅದರ ಸಿಪ್ಪೆಲಿ ಒಂದು ಚಿಕ್ಕ ಚಮ್ಚು ಮಾಡಿ ಕೊಟ್ಟವೆ. ನಾವೇ ತಿರುಳು ತೆಗ್ದ್ ತಿಂಬಕು. ಈ ವಿಧಾನ ನಿಧಾನ ಆಗಿ ಆದರೂ ನಮ್ಮ ಕಡೆ ತಲೆ ಹಾಕಿದೆ. ಈಗ ಜನ ಹಳೆ ವಿಧಾನನ ಮರ್ತ್ಹೋಳೊ. ಬೊಜ್ಜಕ್ಕಾದರೂ ಹಳೇ ರೀತಿಲಿ ತಕಂಡ್ ಪೋಯಿ ತ ಗ್ಯಾನ ಮಾಡ್ರೆ ಈಗಿನವ್ಕೆ ಹಂಗೆ ಕೆತ್ತಿಕೆ ಗೊತ್ತೇ ಇಲ್ಲೆ. ಹಾಗೆ ಬೊಂಡ ಕೆತ್ತುದು ಅಷ್ಟೇನ್ ಸುಲಭದ ಕೆಲ್ಸ ಅಲ್ಲ. ಒಣಗಿದ ತೆಂಗಿನಕಾಯಿನ ಚೂಪು ಸಲಾಕೆಗೆ ಚುಚ್ಚಿ ಒಂದು ದಿನಲಿ ಒಂದು ಸಾವಿರ ಸುಲಿಯಕ್. ಎಳೆ ಚಿಪ್ಪಿಂದ ಹಸಿರು ಸಿಪ್ಪೆ ಅಷ್ಟು ಸುಲಭಲಿ ಎಳ್ಕಿ ಬಾಲೆ. ತಿರುಪತಿ ಕ್ಷೌರದಂಗೆ ನುಣ್ಣಗೆ ಬೋಳಿಸುವ ಕಲೆ ಎಲ್ಲವ್ಕೆ ಕರಗತ ಆಗಿರ್ದುಲೆ. ನಮ್ಮೂರು ಕ್ಷೌರಿಕ ಮುಸ್ಲಿಂ ಮಕ್ಕಳ ತಲೆ ಬೋಳ್ಸ್‌ಕನ ಅಲ್ಲಲ್ಲಿ ಗಾಯಮಾಡಿ ಕಲೆ ಮಾಡ್ತಾ ಇತ್ತ್. ಕೆಲವ್ ಕಡೆ ಕಂದುಗೆಟ್ಟಿದ್ದು ಕೆಲವ್ ಕಡೆ ಕೀವು ಆದ್ ಹಿಂಗೆನೆ. ಅದೇ ರೀತಿಲಿ ಕೆಲವು ಬೊಂಡ ಕೆತ್ತ್‌ಕನ ಚಿಪ್ಪಿಯ ಭಾಗನೂ ಕೆತ್ತಿ ಅದರ್‍ಲಿ ಕಲೆ ಮಾಡ್ತಾ ಇದ್ದೊ.

ನಮ್ಮೂರ್‍ಲಿ ಯಾವುದೇ ಸಭೆ ಸಮಾರಂಭ ನಮ್ಮಪ್ಪ ಏರ್ಪಾಟ್ ಮಾಡಿರೆ ಹತ್ತಿಪ್ಪತ್ತ್ ಬೊಂಡ ಕೆತ್ತಿಸಿ ಗೋಣಿ ಚೀಲಲಿ ತುಂಬಿಸಿ ತಕಂಡ್ ಹೋಗ್ತಾ ಇದ್ದೊ. ಹಿಂದಿನ ದಿನ ಮಧ್ಯಾಹ್ನದ ಮೇಲೆ ಇಬ್ಬರ್–ಮೂವರಿಗೆ ಇದೇ ಕೆಲ್ಸ. ಆಗ ಹಾರಗಳ ಹಾವಳಿ ಇತ್ಲೆ. ಮುಖ್ಯ ಅತಿಥಿಗೆ ಒಂದು ನಿಂಬೆ ಹಣ್ಣ್ ಕೊಟ್ಟರೆ ಆತ್. ಇತ್ತಿಚೆಗೆ ಮಂತ್ರಿಯೊಬ್ಬರ್ ಹಾರಗಳಿಗಾಗಿ ಹಣ ಪೋಲಾಗುದನ್ನ ಸಹಿಸಿಕೆ ಆಗದೆ "ಹಾರಗಳ ಬದಲಿಗೆ ನಿಂಬೆಹಣ್ಣ್ ಕೊಟ್ಟರೆ ಉಪ್ಪಿನ ಕಾಯಿ ಆದರ್ ಹಾಕಿಸಕಾಯ್ತ್" ತಾ ಹೇಳ್ದ್ ನೆನ್ಪಿಗೆ ಬಾತ್. ನಿಂಬೆ ಬದಲ್ ಹೂ ಗುಚ್ಛ ಕೊಡುವ ಸಂಪ್ರದಾಯನ ನಮ್ಮಪ್ಪ ಸುರು ಮಾಡ್ದೊ. ಈಗೀಗ ಕಣ್ಮರೆ ಆಗ್ತಾ ಇರ್‍ವ ನಂದಿ ಬಟ್ಟಲ್ ಹೂ, ಗುಚ್ಛಕ್ಕಾಗಿಯೇ ಹುಟ್ಟಿ ಬಂದಂಗೆ ಇತ್ತ್. ಇದರ ಒಂದು ಗೆಲ್ಲ್‌ಲಿ ಹದಿನೈದ್ ಇಪ್ಪತ್ತ್ ಪಾಪ್ ಕಾರ್ನ್ ತರದ ಬಿಳಿ ಹೂಗ ಇದ್ದ್ ಹಂಗೆನೇ ಬೇಕಾರ್ ಕೊಡಕಿತ್ತ್. ಕ್ರೋಟನ್ ಎಲೆಗಳ ಮಧ್ಯೆ ಇಸಿ ಕೊಟ್ಟರೆ ಇನ್ನೂ ಲಾಯ್ಕ!

ಇನ್ನೂ ಕೂಡ ನಮ್ಮೂರ ಕಡೆಯವ್ಕೆ ಘಟ್ಟದ ಮೇಲಿನವರ ಬೊಂಡ ಕೆತ್ತುವ ಪರಿಣಿತಿ ಎಲ್ಲವ್ಕೂ ಬಾತ್ಲೆ. ಹರಿತ ತೆಳ್ಳಗಿನ ಚೂರಿಯಿಂದ ಬೊಂಡದ ಹೆಣ್ಣು ಗಡಿಯ ಅರ್ಧಭಾಗ ಚೂಪಾಗಿ ಪಿರಮಿಡ್ ತರ ಮಾಡಿ, ಅದರ ಮೊನೆಯಾದ ಭಾಗನ ಕತ್ತರ್‍ಸಿ ತೂತು ಮಾಡಿ (ಬೇಕಾರೆ) ಸ್ಟ್ರಾ ಹಾಕಿ ಕೊಟ್ಟವೆ. ಹಿಂಗೆ ಕತ್ತರಿದ ಬೊಂಡ ಹಿಂದಿನ ಕಾಲದ ಪುರೋಹಿತರ ತಲೆನ ನೆನ್ಪಿಗೆ ತರ್‍ಸಿದೆ. ಇವು ನೆತ್ತಿಯ ಮುಂಭಾಗನ ನುಣ್ಣ ಬೋಳ್ಸ್‌ತಾ ಇದ್ದೊ. ಹಿಂದಕೆ ಕತ್ತಿ, ಕತ್ತರಿ ಮುಟ್ಟಿಸದೆ ಕೂದಲ್ ಬಿಟ್ಟು ಜುಟ್ಟು ಕಟ್ಟುತ್ತಿದ್ದೊ. ದೂರದರ್ಶಲಿ ಬರುವ ಚಾಣಕ್ಯನಂತೆ. ಆಗ ಬ್ರಾಹ್ಮಣರಿಗೇ ಏನು? ಎಲ್ಲಾ ಜಾತಿಯವ್ಕೂ ಜುಟ್ಟು ಇರ್ತಾ ಇತ್ತ್. ಈಗ ಹೆಚ್ಚಿನ ಬ್ರಾಹ್ಮಣರ್ ಜುಟ್ಟು ಇಡ್ದನ್ನ ಬುಟ್ಟೊಳೊ. ಹಿಂದೆ ಜನರ ಉಡುಗೆ ತೊಡುಗೆಗಳ್‌ಂದ ಅವರ ಜಾತಿ ಧರ್ಮನ ಗುರ್ತಿಸ್ತಾ ಇದ್ದೊ. ಈಗ ಹಂಗೆ ಗುರ್ತಿಸಿಕೆ ಸಾಧ್ಯನೇ ಇಲ್ಲೆ. ಇದೊಂದು ಒಳ್ಳೆ ಪರಿವರ್ತನೆ.

ಬೊಂಡ ಮಹಾತ್ಮೆಗೆ ಸಾಕ್ಷಿ ನಮ್ಮೂರ್‍ನ ಹಿಂದಿನ ಕಂಬಳಗ. ಅಂದ್ ಕಂಬಳಲಿ ಗೆದ್ದ ಯಜಮಾನಂಗೆ ಕೊಡ್ತಾ ಇದ್ದದ್ ಬಹಮಾನ ಫಲಕ ಅಲ್ಲ. ಪ್ರಶಸ್ತಿ ಪತ್ರ ಅಲ್ಲ! ನುಣ್ಣಂಗೆ ಬೋಳ್ಸಿದ ಬೊಂಡ! ವರ್ಷವಿಡೀ ಕೋಣಗಳ್ನ ಸಾಂಕೊಕಾದರೆ ಅವನ್ನು ಸಾಂಕಿಕೆ ಸಾಕಿಗನೊಬ್ಬನ ನೇಮಿಸಿ ಅವನ ಖರ್ಚನ್ನೂ ನಿಭಾಯಿಸಿ ಕೋಣ ಗೆದ್ದರ್ತ ಆದ್ರೆ ಬೊಂಡ ಬಹುಮಾನ ತೇಳ್ರೆ ಅದರ ಘನತೆ ಎಷ್ಟಿದ್ದರಕು ತಾ ನೀವೇ ಊಹಿಸಿ. ಕೆಲವೊಂದು ಕಡೆ ಬೊಂಡದ ಕೀಲೆ, ಅಡಿಕೆ ಕೀಲೆ, ಬಾಳೆಗೊನೆನ ಬಹುಮಾನ ಆಗಿ ಕೊಡ್ತಾ ಇದ್ದೊ. ಜಂಬರದ ಸುರುಲೇ ಇವುಗಳ್ನ ವೇದಿಕೆನ ಮೇಲೆ ಎಲ್ಲವ್ಕೂ ಕಾಣುವಂಗೆ ಇಸುವೆ.

ಕರಾವಳಿಂದ ದೂರ ಇರವ್ಕೆ ಬೊಂಡದ ದೋಸೆ, ಬಣ್ಣಾಯಿಯ ಆಪಗಳ ರುಚಿ ಗೊತ್ತಿರಿಕಿಲೆ. ಬೆಳ್ತಿಗೆ ಅಕ್ಕಿ ನೆನ್ಸಿ ಅದ್ಕೆ ಬೊಂಡದ ನೀರ್ ಮತ್ತೆ ಗಂಜಿ, ರುಚಿಗೆ ಹಂಞ ಉಪ್ಪು ಹಾಕಿ ನುಣ್ಣಂಗೆ ರುಬ್ಬಿ ಹಂಞ ನೀರ್ ನೀರ್ ಇರ್‍ವ ರುಬ್ಬಿದ ಹಿಟ್ಟ್‌ನ ಕಾವಲಿಲಿ ತೆಳುವಾಗಿ ಹುಯ್ಯಕು. ಇದರ ರುಚಿ ತಿಂದವ್ಕೆ ಅಷ್ಟೇ ಗೊತ್ತು. ಬಣ್ಣಂಗಾಯಿ ಆಪ ನಾವು ಉದ್ದಿನ ದೋಸೆ ಸಿದ್ದ ಮಾಡ್ದಂಗೆ ಮಾಡಕು. ರುಬ್ಬುಕನ ಅಕ್ಕಿ ಒಟ್ಟಿಗೆ ಬಣ್ಣಂಗಾಯಿ ಸೇರ್‍ಸಕು. ಹಿಟ್ಟು ಬಾಕೆ ಸುರು ಆದಂಗೆ ಕಾವಲಿಗೆ ಎಣ್ಣೆ ಹಾಕಿ ದಪ್ಪ ಹುಯ್ಯಕು. ಉದ್ದಿನ ದೋಸೆನ ಎರಡರಷ್ಟ್ ರುಚಿ ಇದ್ದೆ.

ಕರಾವಳಿಯವು ಬೆಂಡ ಕೆತ್ತ್‌ಕನ ಅದರ ಹೆಣ್ಣ್ ಭಾಗನ ಕೆತ್ತುವೆ. ಮೈಸೂರು ಬೆಂಗಳೂರ್‍ನವು ಗಂಡು ಭಾಗದ ಕಡೆ ಕೆತ್ತುವೆ. ಹೆಣ್ಣ್ ಭಾಗ ಅವ್ಕೆ ಮುಕ್ಕಣ್ಣನ ಸಂಕೇತ ಗಡ!

ಕರಾವಳಿನ ಜನ ಬೊಂಡ ತಲೆಯವಂತೆ ಹಂಗಾಗಿ ಅವು ಬುದ್ದಿವಂತರ್ ತ ಸ ಹೇಳುವೆ.

ಯಾಂತ್ರೀಕರಣಂದ ಜಟಕಾ, ಎತ್ತಿನಗಾಡಿ, ಗಾಣ, ಒನಕೆ, ರಾಟೆ, ಬೀಸು ಕಲ್ಲ್ ಇತ್ಯಾದಿ ಕಣ್ಮರೆ ಆಗ್ತಾ ಉಟ್ಟು. ಜೋನಿಬೆಲ್ಲ, ತಾಳೆಬೆಲ್ಲ ಸವಿದವರೆ ಇಲ್ಲದಾಗ್ತಾ ಒಳೊ. ಮೀನು ಹಿಡಿಯುವ ಯಾಪೆ, ಕೂಳಿ, ಪಡ– ಮಳೆಗಾಲದ ಗೊರಬೆ, ಕಿಡಂಜೋಳು ತಯಾರಿಸುವ ಕಲೆ ಮಾಯ ಆಗ್ತಾ ಉಟ್ಟು. ಅಪ್ಪದಿಟ್ಟು, ಕಾವಲಿ–ಅಟ್ಟ ಸೇರುಟು. ಇದನೆಲ್ಲ ಹಳಬರ ಜೋಳಿಗೆಲಿ ತುಂಬುವ ಪ್ರಯತ್ನ ನಮ್ಮದಾವ್ನು.

# ದಲ್ಲಾಳಿ ಜನ್ನ

–ಮನೋಜ್ ಕುಡೆಕಲ್ಲು

ಎಳೆಬೊಳ್ಪು ಆತ್ಲೆನ್ನೂ ಕೋಳಿನೂ ಕೂಂಗಿತ್ಲೆ
ಹೊರ್ಟುಟು ಆಗಲೆ ದಲ್ಲಾಳಿ ಜನ್ನ

ತಿರ್‍ಗೇಲ್ ನಾಯ್ಗೆಲ್ಲ ಜಂಬರ ಮುಗ್ಸಿದ್
ಕೊಟ್ಟವೆ ಊರಿಡಿ ಪಾಂಗ್‌ನಾ

ಎಲ್ಲಿಂದಲೋ ಚಾಂಬಿದಾ ದುಬಾಯಿ ಪ್ಯಾಂಟ್
ಮೊಣ್ಕಾಲ್‌ವರೆಗೆ ಮೊಡ್ಚೀಟು

ನೀರುಳ್ಳಿ ಚೋಲ್ನ್ಯಂತ ಇಸ್ತ್ರೀನೆ
ಕ್ವಾಟನ್ ಅಂಗಿನಾ ತೊಟ್ಟದ್

ಚಾರ್ಜ್‌ಗೆ ಇಸಿದ ಮೊಬೈಲ್ ಹಿಡ್ದ್
ಆಚೆಗೆ ಒಂದ್ ರಿಂಗ್‌ನ ಕೊಟ್ಟ್

ದೇವ್ರುಗೆ ಕೈಮುಗ್ದ್ ಗಂಧ ಕುಂಕುಮ
ಮೆತ್ತಿಟು ಅಂವ ತಂತ್ರಿನ ಹಾಂಗೆ
ಕುಂದಕೆ ಕೋಸಿದ ಪಂಚಾಂಗ ಪುಸ್ತಕ
ರೆಟ್ಟೆಗೆ ಸಕ್ಸೀಟು ಅಂಬೆರ್‍ಪುಲಿ

ರಾಹು ಗುಳಿಂಙ, ಕೇತು ಕುಜಂಗ
ಗೂಡೆ ನೋಡಿಕೆ ಹೋದರೆ ನೆಂಟ್ರ್‌ಗ
ಇರ್ದೆಲ್ಲ ಜನ್ನ ಬೆನ್ನಂದೆ
ಕಿಸೆಲಿರ್ದು ನೂರಾರ್ ಸಂಬಂಧ ಕುದ್ರದ

ಮೂವತ್ತೈದ್ ದಾಟಿದ ಮೋರೇಗ
ಆಚೆಂದ ಏನಾರ್ ಸಾಬೂನು ಹಾಕಿರೆ
ಎಂತವರ್‍ನೂ ಮಾಡ್ದೆ ಊರ್ವಶಿನಾಂಗೆ
ಗುಣಗಣಂಗ ಕೂಡಿದ್ ಬಾತ್ಲರೆ
ನಿಮೂರ್ತಿ ಹುಡ್ಕೀದೆ ಎಲ್ಲದ್ಕು

ಮೊಗುವ ನಾಲ್ಗೆಗೆ ಬಂದದ್ ಎಲ್ಲ
ಸತ್ಯಂತ ತಿಳ್ಕದ್ ಬೋಳಂಗ
ಬೊಳ್ಪುನ ಚಾಯದ ಬಾಳೆಣ್ಣ್ ಎಲ್ಲ
ಆಡ್ವುದು ಹಡ್ಗ್ ಕಿಸೆಲ್ಯವನ
ಉಂಡರೆ ಅಂವ, ಇರ್ಕಿಲೆ ಒಳ್ಕಡೆ
ನೆಕ್ಕೀದ್ ಬಾಡ್ದ ಬಾಳೇಲಿ

## ಕೊಡಗು ಗೌಡ ಸಮಾಜ ಫೆಡರೇಶನ್‌ನ ಅಧ್ಯಕ್ಷ ಆಗಿ ಸೂರ್ತಲೆ ಸೋಮಣ್ಣ ಆಯ್ಕೆ

ಕೊಡಗು ಗೌಡ ಸಮಾಜ ಫೆಡರೇಶನ್‌ನ ಅಧ್ಯಕ್ಷ ಆಗಿ ಸೂರ್ತಲೆ ಸೋಮಣ್ಣನವು ಆಯ್ಕೆ ಆಗೊಳೊ. ಮಾಜಿ ಅಧ್ಯಕ್ಷ ದಂಬೆಕೋಡಿ ಆನಂದ ಅವು ರಾಜಿನಾಮೆ ಕೊಟ್ಟ ಹಿನ್ನಲೆಲಿ ನಡ್ದ ಸರ್ವ ಸದಸ್ಯರ ಸಭೆಲಿ ನೂತನ ಅಧ್ಯಕ್ಷರನ್ನ ಆಯ್ಕೆ ಮಾಡಲಾತ್. ಉಪಾಧ್ಯಕ್ಷರಾಗಿ ಪೊನ್ನಚನ ಮೋಹನ್, ಕಾರ್ಯದರ್ಶಿಯಾಗಿ ಕೋಳುಮುಡಿಯನ ಅನಂತ್ ಕುಮಾರ್, ಖಜಾಂಜಿಯಾಗಿ ಯಾಳದಾಳು ಮನೋಜ್ ಬೋಪಯ್ಯ ಹಂಗೆನೆ ನಿರ್ದೇಶಕರುಗಳಾಗಿ ದಂಬೆಕೋಡಿ ಆನಂದ, ಕುದುಕುಳಿ ಭರತ್, ಮೂಡಗದ್ದೆ ರಾಮಕೃಷ್ಣ, ತೇನನ ರಾಜೇಶ್ ಸೋಮಣ್ಣ, ಚೆಟ್ಟಿಮಾಡ ಜರ್ನಾಧನ, ಕೇಚಪ್ಪನ ಮೋಹನ್, ಕರಂದ್ಲಾಜೆ ಆನಂದ್, ಸೋಮೆಟ್ಟಿ ದೇವಯ್ಯ, ಪೈಕೇರ ಮನೋಹರ್, ಕೂಡಕಂಡಿ ಕಾವೇರಮ್ಮ ಸೋಮಣ್ಣ, ಉಳುವಾರನ ಅಮೃತ ಕುಮಾರಿ ಇವು ಆಯ್ಕೆ ಆಗೊಳೊ.

ನಮ್ಮ ಪತ್ರಿಕೆಗೆ ಕತೆ, ಕವನ, ಹನಿಗವನ, ಚುಟುಕು, ಲೇಖನ, ಅನುಭವ ಕಥನ, ಪ್ರವಾಸ ಕಥನ
ಹಂಗೆ ಪತ್ರಿಕೆ ಬಗ್ಗೆ ನಿಮ್ಮ ಅನ್ನಿಕೆ ಅಭಿಪ್ರಾಯ ಗಳ್ನ ಬರೆಯವು ಸಂಪೂರ್ಣ ಅರೆಬಾಸೆಲಿ ಬರ್‍ದ್

**ಅರೆಬಾಸೆ ಮುಡ್ಪು ಪತ್ರಿಕೆ**
**C/o ವಸಂತ ಟ್ರೇಡರ್ಸ್**
**ಬೈಪಾಸ್ ರಸ್ತೆ, ಗೋಣಿಕೊಪ್ಪ –571213**
**ವಾಟ್ಸಾಪ್‌ಲಿ ಕಳ್ಸಿರೆ: 9535615759 । ಮಿಂಚಂಚೆಲಿ ಕಳ್ಸಿರೆ: arebasepatrike@gmail.com ಗೆ ಕಳ್ಸಿ ಕೊಡಿ**

# ಕಾವೇರಿ ಹೋಂ ಅಪ್ಲೈಯೆನ್ಸಸ್

### ಕುಕ್ಕರ್ಸ್



### ಮಿಕ್ಸರ್ ಗ್ರೈಂಡರ್ಸ್



### ಗ್ಯಾಸ್ ಸ್ಟೌವ್



### ಕುಕ್‌ವೇರ್ಸ್



### ಸ್ಮಾಲ್ ಅಪ್ಲೈಯೆನ್ಸಸ್



ಸಂಪರ್ಕಿಸಿ :

**ಚೀಯಪ್ಪನ ನವೀನ್ / ಚೀಯಪ್ಪನ ಶರತ್**

ದೂರವಾಣಿ ಸಂಖ್ಯೆ: +91–8884571075 / +91–8861833243 /080–41228359

Email Id: homeappliances.kaveri@gmail.com

#23/8, ಚಾಮುಂಡೇಶ್ವರಿ ಕಾಂಪ್ಲೆಕ್ಸ್, ಚಾಮುಂಡೇಶ್ವರಿ ಲೇಔಟ್, ಶಾಂತಿನಿಕೇತನ್ ಮುಖ್ಯ ರಸ್ತೆ,
ನಿರಂಜನ್ ಮ್ಯಾಕ್ಸಿಮಾ ಅಪಾರ್ಟ್‌ಮೆಂಟ್ ಎದುರು, ಬಿ.ಜಿ. ರಸ್ತೆ, ಅರೆಕೆರೆ, ಬೆಂಗಳೂರು–560076

* ಅರೆಬಾಸೆ ಮುಡ್ಪು ಪತ್ರಿಕೆನ ಚಂದಾ ಹಣನ ಇಲ್ಲಿ ಸ್ವೀಕರಿಸಲಾದೆ.

---

ನೀವ್ಗೆ ನಿಮ್ಮ ಹಳೆ ಕಾರ್ ಓಡ್ಸಿ ಓಡ್ಸಿ ಸಾಕಾಗುಟ್ಟ? ಬೇರೆ ಕಾರ್ ತಕಣಿಕೆ ಹೊರ್ಟ್ಟೊಳರಿನ? ಹಳೆ ಕಾರ್‌ನ ಮಾರೊಕ?..
ಹಂಗಿದ್ದರೆ ತಡ ಯಾಕೆ..? ಎಲ್ಲ ಕಂಪನಿಯ ಹಳೆ ಕಾರ್‌ಗಳ ಖರೀದಿ ಮತ್ತೆ ಮಾರಾಟ...

**ಸಂಪರ್ಕಿಸಿ: ತರುಣ್ ಕೂಡಕಂಡಿ**

**8105072097**

**tharungowda6@gmail.com**









* Design for permanent Irrigation Pipelines
* One time Investment * Easy to operate
* We supply your requirement




# ವಸಂತ್ ಟ್ರೇಡರ್ಸ್

ಬೈಪಾಸ್ ರಸ್ತೆ, ವೆಂಕಟಪ್ಪ ಬಡಾವಣೆ, ಗೋಣಿಕೊಪ್ಪಲು, ದ.ಕೊಡಗು 571 123

**Contact : 08274-247661 Mob : 94487 95589, 94485 87968**

ಶಾಖೆ : ಕಕ್ಕೆಹೊಳೆ, ಸೋಮವಾರಪೇಟ್ – 8904145443 E-mail : vasanthtradersgkl@gmail.com

---

## ನನ್ನ ಕರ್ನಾಟಕ ಅರ್ಪಿಸುವ ಸಿಗ್ಮಾ ಸ್ಪಿರುಲಿನಾ

NANNA KARNATAKA

ಸ್ಪಿರುಲಿನ ಎಂಬುದು ನೀರಿನಲ್ಲಿ ಬೆಳೆಯುವ ಪಾಚಿಯ ತರಹದ ಒಂದು ಸಸ್ಯ. ಇದು ಬರೋಬ್ಬರಿ ನೂರರಷ್ಟು ಪೌಷ್ಠಿಕಾಂಶಗಳಿಂದ ಕೂಡಿದ್ದ ಸಮಗ್ರವಾದ ನೈಸರ್ಗಿಕ ಆಹಾರ. ಒಬ್ಬ ಮನುಷ್ಯ ಆರೋಗ್ಯವಂತನಾಗಿರಲು ಏನೇನು ಬೇಕು ಆ ಎಲ್ಲಾ ಪೌಷ್ಠಿಕಾಂಶಗಳನ್ನು ಒದಗಿಸುವ ಏಕೈಕ ಆಹಾರ. ಇದಕ್ಕೆ ವಿಶ್ವಸಂಸ್ಥೆಯು 1974 ರಲ್ಲಿ ಇದಕ್ಕೆ ಮಾನ್ಯತೆ ನೀಡಿ ತಾಯಿಯ ಎದೆಹಾಲಿನ ನಂತರದ ಸ್ಥಾನ ನೀಡಿದ್ದಾರೆ.

- ✦ ಮಕ್ಕಳಲ್ಲಿ ಬುದ್ಧಿಶಕ್ತಿ ಹೆಚ್ಚಳ ಹಾಗು ರೋಗ ನಿರೋಧಕ ಶಕ್ತಿ ಹೆಚ್ಚಿಸುತ್ತದೆ.
- ✦ ಮಕ್ಕಳಿಗೆ ಉತ್ತಮ ಪ್ರೋಟೀನ್ ಒದಗಿಸುವ ಆಹಾರ
- ✦ ಇದರಲ್ಲಿ ಕಬ್ಬಿಣದ ಅಂಶ ಹೇರಳವಾಗಿದ್ದು ಹಿಮೋಗ್ಲೋಬಿನ್ ಪ್ರಮಾಣವನ್ನು ಹೆಚ್ಚಿಸುತ್ತದೆ.
- ✦ ಮಕ್ಕಳಲ್ಲಿ ಕಾಣುವ ಕಣ್ಣಿನ ಹಲವು ರೋಗಗಳನ್ನು ತಡೆಯುವಲ್ಲಿ ಉಪಯುಕ್ತ
- ✦ ರಕ್ತಹೀನತೆಯಿಂದ ಬಳಲುವ ಮಹಿಳೆಯರಿಗೆ ತುಂಬ ಉಪಯುಕ್ತ
- ✦ ರಕ್ತದಲ್ಲಿ ಕೊಬ್ಬಿನಾಂಶ ಕರಗಿಸಲು ಉಪಯುಕ್ತ
- ✦ ಕ್ಯಾನ್ಸರ್ತಡೆಯಲು ಉಪಯುಕ್ತ







ಅಮೆಜಾನ್.ಕಾಮ್ ಲಿ ಸ ಲಭ್ಯ

ವೆಂಕಟಪ್ಪ ಲೇಔಟ್, ಪ್ರಕ್ರುತಿ ಕ್ರಾಸ್, ಲಕ್ಷ್ಮೀ ದೇವಸ್ಥಾನದ ಹತ್ತಿರ,
ಕೇತಿಗಾನಹಳ್ಳಿ ರಸ್ತೆ, ಬಿಡದಿ, ಬೆಂಗಳೂರು–562 109

**Mob : 9480954342 / 9739869090 / 9481826387**

**nannakarnataka1@gmail.com | www.nannakarnataka.com**